# ಸಿದ್ಧಗಂಗಾ



ಜೂನ್, 1982

## 'ಸಿದ್ಧಗಂಗಾ' ಚಿರಾಯುವಾಗಲೆಂದು ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗಕ್ಕೆ ಕೃತಜ್ಞತೆಗಳು.

900 ಶ್ರೀ ಎಂ. ನಾಗರಾಜು
ಅಕೌಂಟೆಂಟ್
ಸ್ಟೇಟ್ ಬ್ಯಾಂಕ್ ಆಫ್
ಮೈಸೂರು, ಸರಗೂರು
ಹೆಚ್.ಡಿ. ಕೋಟೆ ತಾ||
ಮೈಸೂರು ಜಿಲ್ಲೆ

901 ಶ್ರೀ ಎನ್.ಆರ್.ಮಲ್ಲಿಕಾರ್ಜುನಯ್ಯ
ಮಾರೇನಹಳ್ಳಿ, ಜಯನಗರ,
ಬೆಂಗಳೂರು-41

902 ಪ್ರಾಂಶುಪಾಲರು
ಶ್ರೀ ಸಿದ್ಧಲಿಂಗೇಶ್ವರ
ಸಂಸ್ಕೃತ ಕಾಲೇಜ್,
ಶ್ರೀ ಸಿದ್ಧಗಂಗಾಮಠ
ತುಮಕೂರು ಜಿಲ್ಲೆ.

903 ಶ್ರೀ ಶ್ರೀ ಜಯಚಂದ್ರಶೇಖರ
ಸ್ವಾಮಿಗಳು, ಕೇದಿಗೆ ಮಠ,
ಅರಸೀಕೆರೆ ತಾ||
ಹಾಸನ ಜಿಲ್ಲೆ.

904 ಶ್ರೀಮತಿ ಶಿವರುದ್ರಮ್ಮ
W/o ಶ್ರೀ ಎಂ.ಆರ್.
ಶಿವರಾಜ್. ಮರ್ಚೆಂಟ್
ಮರಳವಾಡಿ, ಕನಕಪುರ ತಾ||
ಬೆಂಗಳೂರು ಜಿಲ್ಲೆ.

905 ಶ್ರೀ ವೆಂಕಟರಾಮಪ್ಪಸೆಟ್ಟಿ
ರೂಪನ ಗುಡಿ,
ಬಳ್ಳಾರಿ ತಾ||

906 ಶ್ರೀಮತಿ ಸಂಗಮ್ಮ
C/o ಐ.ಮ್ ದೇವರಾಜ್,
ಪ್ಲಾಂಟರ್, ಐಗೂರು,
ಹಾಸನ ಜಿಲ್ಲೆ.

907 ಶ್ರೀ ಬಿ.ಎಸ್.ತಿಪ್ಪೆಸ್ವಾಮಿ
ಕೆ. ಬ್ಯಾಡಗೆರೆ
ಮಡಕಸಿರ ತಾ||
ಅನಂತಪುರ ಜಿಲ್ಲೆ
ಆಂಧ್ರ ಪ್ರದೇಶ.

908 ಶ್ರೀ ಸಿ.ಜಿ.ಆರ್.ಕುಮಾರ್
ಕೆ.ಇ.ಬಿ.
ತರೀಕೆರೆ,
ಚಿಕ್ಕಮಗಳೂರು ಜಿಲ್ಲೆ

909 ಕಾರ್ಯದರ್ಶಿಗಳು
ನಂದೀಶ್ವರ ಯುವಕ
ರೈತ ಸಂಘ
ಗುಂಡಿಗೆರೆ
ಮಾಗಡಿ ತಾ||
ಬೆಂಗಳೂರು ಜಿಲ್ಲೆ

(ಮುಂದುವರಿಯುತ್ತದೆ)

# ಸಿದ್ಧಗಂಗಾ

ಸಂಪುಟ—೧೮ ಸಂಚಿಕೆ-೬ ಜೂನ್, ೧೯೮೨

ಭವಾಂಬೋಧಿನಾವಂ ಸದಾಶುದ್ಧಭಾವಂ
ಶಿವಂ ಶಾಂತಮೇಕಂ ಪರಿತ್ರಾತಲೋಕಂ ।
ಶಿವಾನಂದಲಿಂಗಂ ಶಿವಾದ್ವೈತಲಿಂಗಂ
ಪರಬ್ರಹ್ಮ ಲಿಂಗಂ ಭಜೇಸಿದ್ಧಲಿಂಗಂ ॥

  

ಆಸೆಯಾಮಿಷ, ತಾಮಸ, ಹುಸಿ, ವಿಷಯ,
ಕುಟಿಲ, ಕುಹಕ,ಕ್ರೋಧ,ಕ್ಷುದ್ರ, ಮಿಥ್ಯೆ—
ಇವನೆನ್ನ ನಾಲಗೆಯ ಮೇಲಿಂದತ್ತ ತೆಗೆದು ಕಳೆಯಯ್ಯ,
ಅದೇಕೆಂದೊಡೆ ನಿಮ್ಮತ್ತಲೆನ್ನ ಬರಲೀಯವು.
ಇದುಕಾರಣ, ಇವೆಲ್ಲವ ಕಳೆದು
ಎನ್ನ ಪಂಚಯ್ಯವರ ಭಕ್ತರ ಮಾಡು,
ಕೂಡಲ ಸಂಗಮದೇವಾ.

—ಬಸವಣ್ಣ ನವರು.

# ಈ ಸಂಚಿಕೆಯಲ್ಲಿ



### ಚಂದಾದಾರರಲ್ಲಿ ವಿನಂತಿ

1982 ನೆಯ ವರ್ಷದ ಚಂದಾ ನಂಬರ್ ಗುರುತಿಸಿಕೊಳ್ಳಿ. ವಿಳಾಸ ಬದಲಾವಣೆ ಮುಂತಾದ ವಿಚಾರಗಳಲ್ಲಿ ನಮ್ಮೊಡನೆ ವ್ಯವಹರಿಸುವಾಗ ತಮ್ಮ ಚಂದಾ ನಂಬರ್ ಮತ್ತು ನಮ್ಮ ಪ್ರತಿನಿಧಿಗಳ ಹೆಸರನ್ನು ಬರೆಯುವುದನ್ನು ಮರೆಯಬೇಡಿ. ಚಂದಾ ಬಾಕಿ ಇರುವವರು ಸಂದಾಯಮಾಡಿ, ಸದಸ್ಯತ್ವವನ್ನು ಮುಂದುವರಿಸಿಕೊಂಡು 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿರಿ. ಸಿದ್ಧಗಂಗಾ ತರಿಸಿಕೊಳ್ಳುವಂತೆ ತಮ್ಮ ಬಂಧು ಮಿತ್ರರು ಮತ್ತು ಹಿತೈಷಿಗಳನ್ನು ಪ್ರೋತ್ಸಾಹಿಸಿ.



# ಶ್ರೀವಾಣಿ

ಭರತಖಂಡ ಜಗತ್ತಿಗೇ ಬೆಳಕನ್ನು ಕೊಟ್ಟಂಥ ರಾಷ್ಟ್ರ. ಇದು ಅಭಿಮಾನದ ಮಾತಲ್ಲ; ವಿದೇಶಿಯರ ಮುಕ್ತ ಪ್ರಶಂಸೆ, ಬೇರೆ ರಾಷ್ಟ್ರಗಳ ಜನಾಂಗ ಸಂಸ್ಕೃತಿಯ ಹೊಸ್ತಿಲನ್ನೇ ತುಳಿಯದೆ ಅನಾಗರಿಕವಾಗಿ ಬಾಳ್ವೆಯಲ್ಲಿ ತೊಳಲುತ್ತಿದ್ದಾಗ ಭರತಖಂಡದ ಜನಾಂಗ ಸುಸಂಸ್ಕೃತವಾಗಿ ನಾಗರಿಕತೆಯ ತುತ್ತತುದಿಗೇರಿ ತುಂಬು ಬದುಕನ್ನ ನಡೆಸುತ್ತಿದ್ದರು. ಇಂಥ ಶಕ್ತಿ ಭರತ ಖಂಡಕ್ಕೆ ಎಲ್ಲಿಂದ ಬಂತೆಂಬ ಪ್ರಶ್ನೆ ಉದಯವಾದಾಗ 'ಸಂಸ್ಕೃತ ಭಾಷೆಯ ಮಹತ್ವವೇ ಅದಕ್ಕೆ ಕಾರಣ' ಎಂಬ ಉತ್ತರ ಯಾರಿಗಾದರೂ ಅರಿವಾಗದಿರದು. ಸಂಸ್ಕೃತ ವಾಙ್ಮಯ ಅಪಾರ, ವಿಶ್ವಮಾನ್ಯ. ವಾಲ್ಮೀಕಿ ವ್ಯಾಸ, ಕಾಳಿದಾಸರು, ಡಾಂಟೆ ಮಿಲ್ಟನ್, ಷೇಕ್ಸ್‌ಪಿಯರರನ್ನ ಹಿರಿಗಟ್ಟಿ ನಿಲ್ಲುವ ವಿಶ್ವಕವಿಗಳು. ಅವರ ಕಾವ್ಯ ನಿತ್ಯನೂತನ, ಸಾರ್ವತ್ರಿಕ. ಅದರಂತೆ ಶಂಕರ, ಮಾಧ್ವ, ರಾಮಾನುಜರು ಸಾಕ್ರಟೀಸ್, ಅರಿಸ್ಟಾಟಲ್, ಗೆಲಿಲಿಯರನ್ನು ಮೀರಿಸುವಂತಹ ದಾರ್ಶನಿಕರು. ಅವರ ದರ್ಶನದ ಬೆಳಕು ಹೊಸದು, ವಿಶ್ವಪ್ರಕಾಶಿ. ಆದ್ದರಿಂದ ಇಂಥ ಮಹಾ ಮಹಿಮೆಯುಳ್ಳ ಸಂಸ್ಕೃತ ಭಾಷೆಯನ್ನು ಗೌರವಿಸಬೇಕಾಗಿದೆ.

"ಸಿದ್ಧಗಂಗಾ" ಮಾಸ ಪತ್ರಿಕೆ

ಪ್ರಕಾಶಕರು

ಹೆಚ್.ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ



ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

ವಾರ್ಷಿಕ ಚಂದಾ 15-00 ರೂ

ಆಜೀವ ಸದಸ್ಯತ್ವ 151-00 ರೂ

ಪ್ರಕಾಶಕರು

'ಸಿದ್ಧಗಂಗಾ' ಮಾಸಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ.

### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.



# ಸಂಪಾದಕೀಯ

ಮೇ ಸಂಚಿಕೆಯನ್ನು ಮೊನ್ನೆತಾನೆ ಕಳುಹಿಸಲಾಯಿತು. ಜೂನ್ ತಿಂಗಳ ಸಂಚಿಕೆ ಇದೀಗ ತಮ್ಮ ಕೈ ಸೇರುತ್ತಿದೆ. ಸಕಾಲದಲ್ಲಿ ತಲುಪಿಸಲು ಸಾಧ್ಯವಾಗದಿದ್ದುದಕ್ಕೆ ಕ್ಷಮೆ ಯಾಚಿಸುತ್ತೇವೆ. ಇನ್ನುಳಿದ ಸಂಚಿಕೆಗಳನ್ನು ಬೇಗಬೇಗ ಕಳುಹಿಸಲು ಪ್ರಯತ್ನಿಸುತ್ತೇವೆ. ಏಪ್ರಿಲ್ ತಿಂಗಳಲ್ಲಿ ನಡೆದ ಸುವರ್ಣ ಮಹೋತ್ಸವ ಸಮಾರಂಭದ ಪೂರ್ಣ ವಿವರವನ್ನೊಳಗೊಂಡ ಬೃಹತ್ ಸಂಚಿಕೆಯನ್ನು ಹೊರತರುವ ಉದ್ದೇಶದಿಂದ ಮೇ ಸಂಚಿಕೆ ತಡವಾಯಿತು. ಸತತ ಪ್ರಯತ್ನಪಟ್ಟರೂ ಅನೇಕ ಅಡೆತಡೆ ಬಂದೊದಗಿದುದರಿಂದ ಪೂರ್ಣವಾಗಿ ಹೊರತರಲಾಗಲಿಲ್ಲ. ಆನಂತರದ ಸಂಚಿಕೆಗಳಲ್ಲಿ ಪ್ರಕಟಿಸುವ ವಿಷಯ ತಿಳಿಸಿದರೂ ಪ್ರಯತ್ನ ಸಫಲವಾಗಲಿಲ್ಲ. ಇಷ್ಟಾದರೂ ಉಳಿದ ಭಾಷಣಕಾರರ ಭಾಷಣದ ವಿವರಗಳನ್ನು ಕೊಡುವ ಪ್ರಯತ್ನವನ್ನು ಮುಂದುವರಿಸಲಾಗುತ್ತಿದೆ. ಪತ್ರಿಕೆಗಳು ಸಕಾಲದಲ್ಲಿ ಬರಲಿಲ್ಲವಾದರೂ ನಮ್ಮ ಓದುಗ ಬಂಧುಗಳು ತೋರಿಸಿದ ಕ್ಷಮೆ, ತಾಳ್ಮೆ, ಸಹನೆಗಳು ನಿಜಕ್ಕೂ ಗಣನೀಯ ಪ್ರಮಾಣದವು. ನಮ್ಮೆಲ್ಲ ಅಭಿಮಾನಿಗಳ ಸಹಕಾರ ದೊಡ್ಡದು. ನಾವು ಹಿಂದಿನ ಸಂಚಿಕೆಯಲ್ಲಿ ಕಾಣಿಸಿರುವಂತೆ ಅನಿವಾರ್ಯ ತಾತ್ವಿಕ ತೊಂದರೆಗಳು ವಿಳಂಬಕ್ಕೆ ಕಾರಣವಾಯಿತು. ಭಗವಂತನ ಕೃಪೆಯಿಂದ ಎಲ್ಲ ತೊಂದರೆಗಳು ನಿವಾರಣೆಯಾಗುವ ಸೂಚನೆ ಕಂಡುಬರುತ್ತಿವೆ. ಸಕಾಲದಲ್ಲಿ ಪತ್ರಿಕೆಗಳನ್ನು ಕಳುಹಿಸುವ ವ್ಯವಸ್ಥೆಯನ್ನು ಮಾಡುತ್ತಿದ್ದೇವೆ. ಸಹೃದಯರಾದ ಬಂಧು-ಬಗಿನಿಯರು ಇದುವರೆಗೂ ಕೊಟ್ಟ ಸಹಕಾರವನ್ನು ಮುಂದುವರಿಸುತ್ತೀರೆಂದು ನಂಬಲಾಗಿದೆ.

—

# ನವನೀತ

**ನಾಲೋಕಃ ಕ್ರಿಯತೇ ಸೂರ್ಯೇ ಭೂಃ ಪ್ರತೀಪಂ ನಧಾರ್ಯತೇ |**
**ನಹಿ ಪ್ರತ್ಯುಪಕಾರಣಾನುಪೇಕ್ಷಾ ಸತ್ಸು ವಿದ್ಯತೇ ||**

—ಸುಭಾಷಿತ ರತ್ನಭಂಡಾಗಾರ

ಸೂರ್ಯನು ಬೆಳಕನ್ನು ಕೊಡುತ್ತಾನೆ. ಅವನನ್ನು ತೋರಿಸಲು ಬೇರೆ ಬೆಳಕು ಬೇಡ. ಭೂಮಿಯು ಎಲ್ಲರನ್ನೂ ಧರಿಸುತ್ತದೆ. ಅದನ್ನು ಯಾರೂ ಹೊತ್ತಿಲ್ಲ. ಹಾಗೆಯೇ ಸತ್ಪುರುಷರು ಪ್ರತ್ಯುಪಕಾರ ಬಯಸುವುದಿಲ್ಲ.

‡ ‡ ‡ ‡ ‡

**ಶರದಂಬುಧರಚ್ಛಾಯಾಗತ್ವರ್ಯೋ ಯೌವನ ಶ್ರಿಯಃ |**
**ಆಪಾತರಮ್ಯಾ ವಿಷಯಾಃ ಪರ್ಯಂತಪರಿತಾಪಿನಃ ||**

—ಕಿರಾತಾರ್ಜುನೀಯ

ತಾರುಣ್ಯದ ಶೋಭೆಯು ಶರತ್ಕಾಲದ ಮೋಡಗಳ ನೆರಳಿನಂತೆ ಶಾಶ್ವತವಲ್ಲ. ವಿಷಯ ಸುಖಗಳು ಮೇಲೆ ನೋಡುವುದಕ್ಕೆ ಸುಂದರವಾಗಿದ್ದರೂ ಕೊನೆಗೆ ದುಃಖ ವನ್ನು ಕೊಡುತ್ತವೆ.

‡ ‡ ‡ ‡ ‡

**ಇದಮೇವ ಹಿ ಪಾಂಡಿತ್ಯಂ ಚಾತುರ್ಯಮಿದಮೇವ ಹಿ |**
**ಇದಮೇವ ಸುಬುದ್ಧಿತ್ವಮಾಯಾದಲ್ಪತರೋ ವ್ಯಯಃ ||**

—ಸಮಯೋಚಿತ ಪದ್ಯಮಾಲಿಕಾ

ಪಾಂಡಿತ್ಯವೆಂದರೆ ಇದೇ, ಜಾಣ್ಮೆಯೆಂದರೆ ಇದೇ, ಬುದ್ಧಿಶಾಲಿತೆ ಎಂದರೆ ಇದೇ, ಆದಾಯಕ್ಕಿಂತ ಕಡಿಮೆಯಾಗಿ ವ್ಯಯ ಎಂಬುದು.



# ಶ್ರೀ ಮಲ್ಲಾರಾಧ್ಯರ ನಿಧನ

ಕರ್ನಾಟಕ ರಾಜ್ಯದ, ಮೈಸೂರು ತಾಲ್ಲೂಕಿನ ಜಂತೆಗಹಳ್ಳಿಯಲ್ಲಿ ಜನ್ಮವೆತ್ತಿದ ಸನ್ಮಾನ್ಯ ಶ್ರೀ ಜೆ.ಬಿ. ಮಲ್ಲಾರಾಧ್ಯರು ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಪರೀಕ್ಷೆ ಯಲ್ಲಿ ಗೌರವಸ್ಥಾನ ಪಡೆದವರು. ಇವರು ಭಾರತೀಯ ಆಡಳಿತದ ಸೇವಾ ಪದವಿ ಹೊಂದಿದ ಮಹಾ ಪ್ರತಿಭಾಶಾಲಿಗಳು ಆಗಿದ್ದರು.

ಇವರು ಹಲವಾರು ಕ್ಷೇತ್ರಗಳಲ್ಲಿ ನಾನಾಮುಖ ಸೇವೆ ಸಲ್ಲಿಸಿದ್ದರು. ಉಪ ವಿಭಾಗಾಧಿಕಾರಿಯಾಗಿಯೂ, ಜಿಲ್ಲಾಧಿಕಾರಿಯಾಗಿಯೂ, ನ್ಯಾಯಾಧೀಶರಾಗಿಯೂ ಸಾರ್ವಜನಿಕ ಶಿಕ್ಷಣ ಇಲಾಖೆಯ ನಿರ್ದೇಶಕರಾಗಿಯೂ, ಜನಗಣತಿಯ ಮುಖ್ಯಾಧಿ ಕಾರಿಯಾಗಿಯೂ, ಕಾರ್ಮಿಕ ಆಯುಕ್ತರಾಗಿಯೂ, ಲೋಕಸೇವಾ ಆಯೋಗದ ಸದಸ್ಯರಾಗಿಯೂ, ವಿವಿಧ ಇಲಾಖೆಗಳ ಮುಖ್ಯ ಕಾರ್ಯದರ್ಶಿಯಾಗಿಯೂ, ಶ್ರೀಮನ್ ಮಹಾರಾಜರ ಆಪ್ತ ಕಾರ್ಯದರ್ಶಿಯಾಗಿಯೂ, ಉಭಯ ಶಾಸನ ಸಭಾ ಸದಸ್ಯ ರಾಗಿಯೂ, ವಿರೋಧ ಪಕ್ಷದ ನಾಯಕರಾಗಿಯೂ ಪೂರ್ಣಾವಧಿಯ ಯಶಸ್ವೀ ಸೇವೆ ಸಲ್ಲಿಸಿದರು.

ಇವರು ಅಗ್ರಮಾನ್ಯ ಹಿರಿಯ ಕ್ರೀಡಾಪಟುಗಳು ಸಹ ಆಗಿದ್ದರು. ಅಂದಿನ ಮಹಾರಾಜರುಗಳಿಗೂ ಸಹ ಇವರು ಆಪ್ತ ಕಾರ್ಯದರ್ಶಿಯಾಗಿ ಮನಮೆಚ್ಚುವಂತೆ ಕೆಲಸ ಮಾಡಿದವರು. ಇವರು ದೀರ್ಘಕಾಲ ಮೈಸೂರು ವಿಶ್ವವಿದ್ಯಾನಿಲಯದ ಆಡಳಿತ ಮಂಡಳಿಯ ಸದಸ್ಯರಾಗಿಯೂ ಇದ್ದರು: ರಾಜ್ಯ ಸರ್ಕಾರದಿಂದ ನೇಮಿಸಲ್ಪಟ್ಟ ಸಮಿತಿಗಳ ಅಧ್ಯಕ್ಷರಾಗಿಯೂ ಸಹ ಸೇವೆ ಸಲ್ಲಿಸಿದ್ದರು.

ದಕ್ಷ ಆಡಳಿತಗಾರರು, ಶಿಕ್ಷಣ ತಜ್ಞರು, ಜ್ಞಾನಿಗಳು, ರಾಜನೀತಿ ನಿಪುಣರು, ಕೆಚ್ಚೆದೆಯ ವೀರರು, ಘನತೆವೆತ್ತವರು, ರಾಷ್ಟ್ರಪ್ರೇಮಿಗಳು ಆದ ಮಾನ್ಯ ಶ್ರೀ ಮಲ್ಲಾ ರಾಧ್ಯರು ಕರ್ನಾಟಕ ರಾಜ್ಯಕ್ಕೆ ಕಳಶಪ್ರಾಯರಾಗಿದ್ದರು. ಜೆ. ಬಿ. ಎಂದರೆ ಕರ್ನಾ ಟಕದವರಿಗೆಲ್ಲಾ ಚಿರಪರಿಚಿತರು. ನಾಡು ಮತ್ತು ವೀರಶೈವಕ್ಕೆ ಅನುಪಮ ಸೇವೆ ಸಲ್ಲಿಸಿರುವ ಇವರನ್ನು ಯಾವ ಬಿರುದಿನಿಂದ ಕರೆದರೂ ಸಲ್ಲುತ್ತದೆ.

ಇವರು ಶ್ರದ್ಧಾವಂತ ಧರ್ಮಾಭಿಮಾನಿಗಳಾಗಿದ್ದು ಧರ್ಮ, ನೀತಿ ಸಂಹಿತವಾದ ನಾಡನ್ನು ಕಟ್ಟಲು ಆಸಕ್ತರಾಗಿದ್ದರು. ಶಿಸ್ತು ಮತ್ತು ದಕ್ಷತೆ ಇವರ ಆಡಳಿತದ ವೈಶಿಷ್ಟ್ಯವಾಗಿತ್ತು. ವೀರಶೈವ ಧರ್ಮವು ತನ್ನ ಕಾಲ ಮೇಲೆ ತಾನು ನಿಂತಿರುವ ಸ್ವತಂತ್ರ ಧರ್ಮವೆಂದು ಸಮರ್ಥಿಸಿದ್ದ ಇವರು ಪತ್ರಿಕಾಗೋಷ್ಠಿಗಳಲ್ಲಿ ರಚನಾತ್ಮಕ ವಾಗಿ ಮಾತನಾಡುತ್ತಿದ್ದರು. ವೀರಶೈವ ಸಮಾಜವು ಬಾಳಿಬದುಕಬೇಕಾದರೆ ಎಲ್ಲಾ ವೀರಶೈವರು ತಮ್ಮ ತಮ್ಮಲ್ಲಿಯ ಒಳಪಂಗಡ ಮರೆತು ಮಹಾಸಭೆಯನ್ನು ಸುಸಂಘಟಿತ

ಮತ್ತು ಸಮರ್ಥ ಸಂಸ್ಥೆಯನ್ನಾಗಿ ಮಾಡಬೇಕೆಂದು ಹೇಳುತ್ತಿದ್ದರು. ಬರೆದ ಪತ್ರಗಳಿಗೆ ಒಡನೆಯೇ ಪತ್ರ ಬರೆಯುತ್ತಿದ್ದರು.

ಇವರು ಅಖಿಲಭಾರತ ವೀರಶೈವ ಮಹಾಸಭೆಯ ಅಧ್ಯಕ್ಷರಾಗಿ ವೀರಶೈವರನ್ನು ಸುಸಂಘಟಿಸುವ ಕಾಯಕದಲ್ಲಿ ರಚನಾತ್ಮಕ ಪ್ರಯತ್ನ ಮಾಡಿದ್ದರು. ರಾಷ್ಟ್ರೀಯ ಜನಗಣತಿಯ ಸಂಬಂಧವಾಗಿ ಅತ್ಯಂತ ಪರಿಣಾಮಕಾರಿಯಾಗಿ ಕಾಯಕ ನಿರ್ವಹಿಸಿ ವೀರಶೈವ ಸಮಾಜದಲ್ಲಿ ಒಂದು ನವಚೇತನ, ಜಾಗೃತಿ ಉಂಟುಮಾಡಿದ್ದರು.

ದಿನಾಂಕ 23-12-1973 ರಂದು ಬೆಂಗಳೂರಿನ ಗಾಜಿನ ಮನೆಯಲ್ಲಿ ಜರುಗಿದ ಅಖಿಲ ಭಾರತ ವೀರಶೈವ ಮಹಾಸಭೆಯ 19ನೇ ಬಹಿರಂಗ ಐತಿಹಾಸಿಕ ಅಧಿವೇಶನದಲ್ಲಿ ಅಧ್ಯಕ್ಷ ಸ್ಥಾನದಿಂದ ಇವರು ಮಾಡಿದ ಭಾಷಣ ವಿಚಾರಪೂರಿತ, ಪ್ರಭಾವಪೂರಿತ, ಸಂದರ್ಭೋಚಿತ ಹಾಗೂ ಉಪಯುಕ್ತವಾಗಿತ್ತು. ತಮ್ಮ ಅಧ್ಯಕ್ಷ ಭಾಷಣದಲ್ಲಿ ಇವರು ಸೂಚಿಸಿದ ಕಾರ್ಯ ಯೋಜನೆಯ 20 ಅಂಶಗಳ ಕಾರ್ಯಕ್ರಮ ಗಮನಾರ್ಹವಾಗಿದೆ.

ಇವರ ಬಹುಮುಖ ಪ್ರತಿಭೆ ಇಂದಿನ ಯುವಕರಿಗೆ ದಾರಿದೀಪ, ನಿರಂತರ ನಂದಾದೀಪ.

ಇವರು 22-6-1982 ರಂದು ಲಿಂಗೈಕ್ಯರಾಗಿದ್ದಾರೆ. ಇದು ವೀರಶೈವ ಸಮಾಜಕ್ಕೆ ಅಲ್ಲದೆ ಕರ್ನಾಟಕ ರಾಜ್ಯಕ್ಕೆ ತುಂಬಲಾಗದ ನಷ್ಟವಾಗಿದೆ. ಇವರ ಅಗಲಿಕೆ ಸ್ವಾಭಾವಿಕವಾದರೂ ಅವನ್ನು ಮರೆಯುವುದು ತುಂಬಾ ಕಷ್ಟಸಾಧ್ಯವಾಗಿದೆ.

—ಸು. ಮಲ್ಲಿಕಾರ್ಜುನಪ್ಪ





# ವೀರಶೈವರ ಯೋಗಪದ್ಧತಿ

—ಶ್ರೀ ಕುಮಾರ ಸ್ವಾಮಿಗಳವರು, ನವಕಲ್ಯಾಣಮಠ, ಧಾರವಾಡ

ಭಾರತದೇಶದಲ್ಲಿ ಯೋಗಶಾಸ್ತ್ರವು ಬಹಳ ಪ್ರಾಚೀನ ಕಾಲದಿಂದಲೂ ಪ್ರಚಾರದಲ್ಲಿದೆ. ಈ ಯೋಗವಿದ್ಯೆಯನ್ನೂ ಅದರ ಅನುಷ್ಠಾನವಿಧಿಯನ್ನೂ ನಚಿಕೇತನು ಯಮನಿಂದ ಪಡೆದುಕೊಂಡು ಅಪಾಪವಿದ್ಧನೂ ಅಮರನೂ ಆದನೆಂದು ಕಂಠೋಪನಿಷತ್ತು ಹೇಳುತ್ತದೆ. ಈ ಯೋಗಶಾಸ್ತ್ರವು ಯಾರಿಂದ ಯಾವಾಗ ಬಳಕೆಯಲ್ಲಿ ಬಂದಿತೆಂದು ನಿರ್ದಿಷ್ಟವಾಗಿ ಹೇಳಲಿಕ್ಕೆ ಐತಿಹಾಸಿಕ ಸಾಮುಗ್ರಿಗಳಿಲ್ಲ. ಹಿರಣ್ಯಗರ್ಭನಿಂದ ಯೋಗಶಾಸ್ತ್ರವು ಉಪದೇಶಿಸಲ್ಪಟ್ಟಿತೆಂದು ಹೇಳುವ ವಾಡಿಕೆ ಇದೆ. ಹಾಗೆಯೆ ರುದ್ರನಿಂದಲು ಮತ್ತೊಂದು ಯೋಗಶಾಸ್ತ್ರವು ಉಪದೇಶಿಸಲಾಗಿದೆಯೆಂದು ಇನ್ನೊಂದು ಐತಿಹ್ಯವಿದೆ ಇವೆರಡು ಐತಿಹ್ಯಗಳಿವೆ. ಇವೆರಡು ಐತಿಹ್ಯಗಳನ್ನು ಒಪ್ಪಿಕೊಂಡರೆ ಯೋಗಶಾಸ್ತ್ರಕ್ಕೆ ಎರಡು ಸ್ವರೂಪಗಳನ್ನು ಒಪ್ಪಿಕೊಂಡಂತಾಗುವದು. ಆಳ್ವಿದು ನೋಡಿದರೆ ಹಿರಣ್ಯಗರ್ಭನಾಗಲಿ ರುದ್ರನಾಗಲಿ ಐತಿಹಾಸಿಕ ವ್ಯಕ್ತಿಗಳೇ ಅಲ್ಲ; ಆದರೂ ಆಧ್ಯಾತ್ಮಿಕ ದೃಷ್ಟಿಯಿಂದ ಅವೆರಡು ಹೆಸರುಗಳಲ್ಲಿ ಔಚಿತ್ಯವಿಲ್ಲದೆ ಇಲ್ಲ ಹಿರಣ್ಯಗರ್ಭನೆಂದರೆ ಮಹತ್ ಅಥವಾ ಬುದ್ಧಿ ಎಂದೂ ರುದ್ರನೆಂದರೆ ಸಂಕಲ್ಪ ಅಥವಾ ಶಕ್ತಿ ಎಂದೂ ಸಾಂಕೇತಿಕ ಅರ್ಥಗಳಿವೆ. ಹಿರಣ್ಯಗರ್ಭನ ಯೋಗವೆಂದರೆ ಬುದ್ಧಿಪ್ರಧಾನವಾದ ಯೋಗವೆಂದೂ ರುದ್ರನ ಯೋಗವೆಂದರೆ ಶಕ್ತಿಪ್ರಧಾನವಾದ ಯೋಗವೆಂದೂ ಪರ್ಯಾಯವಾಗಿ ಹೇಳಿದಂತಾಯಿತು. ಹಿರಣ್ಯಗರ್ಭನ ಯೋಗಪರಂಪರೆಯು ಪಾತಂಜಲ ಯೋಗಸೂತ್ರದಲ್ಲಿ ಪ್ರತಿಬಿಂಬಿತವಾಗಿದ್ದರೆ ರುದ್ರನ ಯೋಗಪರಂಪರೆಯ ಆಗಮಗಳಲ್ಲಿ ಅವುಗಳಲ್ಲಿಯೂ ಮುಖ್ಯವಾಗಿ ಶಿವಾಗಮಗಳಲ್ಲಿ ಪ್ರಾದುರ್ಭವಿಸಿದೆ ಹಿರಣ್ಯಗರ್ಭನ ಯೋಗವು ಎಲ್ಲಿ ಮುಗಿಯುವುದೋ ಅಲ್ಲಿಂದಲೇ ರುದ್ರನ ಯೋಗವು ಆರಂಭವಾಗುವದು "ಪುರುಷಾರ್ಥ ಶೂನ್ಯಾನಾಂ ಗುಣಾನಾಂ ಪ್ರತಿಪ್ರಸವಃ ಕೈವಲ್ಯಮ್ ಸ್ವಗ್ರತಿಷ್ಠಾವಾ ಚಿತಿಶಕ್ತಿರಿತಿ" ಈ ಸೂತ್ರದಿಂದ ಯೋಗದರ್ಶನವು ಕೊನೆಗೊಳ್ಳುತ್ತದೆ. ಚಿತಿಶಕ್ತಿಯಿಂದ ಇಲ್ಲವೆ ಚಿತ್‌ಶಕ್ತಿಯಿಂದ ರುದ್ರನ ಯೋಗವು ಆರಂಭವಾಗುತ್ತದೆ. ಪಾತಂಜಲ ಯೋಗದರ್ಶನಕ್ಕೆ ಸಾಂಖ್ಯ ತತ್ವದರ್ಶನನೇ ತಳಹದಿಯಾಗಿದೆ. ಪುರುಷ-ಪ್ರಕೃತಿ ಎಂಬ ಎರಡೇ ತತ್ವಗಳನ್ನು ಸಾಂಖ್ಯದರ್ಶನವು ಒಪ್ಪಿಕೊಳ್ಳುತ್ತದೆ. ಪ್ರಕೃತಿಯು ಜಡ, ಪುರುಷ ಚೇತನ; ಪ್ರಕೃತಿಯು ಒಂದು, ಪುರುಷರು ಹಲವು; ಪ್ರಕೃತಿಯು ಜ್ಞೇಯ, ಪುರುಷನು ಜ್ಞಾತಾ. ಆದರೆ ರುದ್ರನ ಯೋಗದಲ್ಲಿ ಜ್ಞಾತಾ, ಜ್ಞಾನ, ಜ್ಞೇಯವೆಂಬ ತ್ರಿಪುಟಿ ಇದೆ. ಪುರುಷನು ಜ್ಞಾತಾ, ಪ್ರಕೃತಿಯು ಜ್ಞಾನ ಪರಬ್ರಹ್ಮನು ಜ್ಞೇಯ. ಚಿತ್‌ಶಕ್ತಿಯು ಈ

ಪರಬ್ರಹ್ಮನ ಈ ಪರಶಿವನ ಕೂಡ ಅವಿನಾಭಾವ ಸಾಮರಸ್ಯದಿಂದಿರುವ ವಿಮರ್ಶೆಯು ಈ ವಿಮರ್ಶಶಕ್ತಿಯ ವಿಲಾಸವೇ ಒಂದೆಡೆಗೆ ಸೃಷ್ಟಿಯಾಗಿಯೂ ಇನ್ನೊಂದೆಡೆಗೆ ಜೀವ ಸಮುದಾಯವಾಗಿಯೂ ಕಂಗೊಳಿಸುವದು. ವಿಮರ್ಶಶಕ್ತಿಯ ವಿಕಾಸದಿಂದ ಜೀವನು ತನ್ನ ಕರ್ತೃತ್ವಶಕ್ತಿಯನ್ನು ಕಲ್ಪಕ ವೃತ್ತಿಯನ್ನು ಬೆಳಗಿಸಿಕೊಂಡು, ಸ್ವರೂಪಜ್ಞಾನವನ್ನು ಪಡೆದು ಪರಶಿವನೊಡನೆ ಸಾಮರಸ್ಯವನ್ನು ಹೊಂದುವದೇ ಶಕ್ತಿ ವಿಶಿಷ್ಟಾದ್ವೈತ ಪರವಾದ ವೀರಶೈವ ದರ್ಶನದಲ್ಲಿ ಯೋಗವೆನ್ನಿಸಿಕೊಳ್ಳುವದು.

ಋಷಿಗಳಲ್ಲಿ ಕೆಲವರು ಪಶುಧರ್ಮಪರಾಯಣರೆಂದೂ ಹಲವರು ಪತಿಧರ್ಮ ಪರಾಯಣರೆಂದೂ ಹೇಳಲಾಗುತ್ತದೆ. ಶೈವಧರ್ಮದಲ್ಲಿ ಪ್ರಕೃತಿಗೆ ಇಲ್ಲವೆ ಜೀವನಿಗೆ ಪಶುವೆಂದೂ ಸಾಂಕೇತಿಕ ಅರ್ಥವಿದೆ, ಪಶುಧರ್ಮ ಪರಾಯಣರೆಂದರೆ ಪ್ರಾಕೃತ ಧರ್ಮಾವಲಂಬಿಗಳೆಂದೂ ಪತಿಧರ್ಮ ಪರಾಯಣರೆಂದರೆ ಅಪ್ರಾಕೃತ ಧರ್ಮಾವಲಂಬಿಗಳೆಂದೂ ಅರ್ಥವಾಗುವದು. ಇದಕ್ಕನುಗುಣವಾಗಿ ಯೋಗವಾದರೂ ಪ್ರಾಕೃತ ಅಪ್ರಾಕೃತವೆಂದು ಎರಡು ವಿಧವಾಗಿದೆ. ಹಿರಣ್ಯಗರ್ಭನ ಯೋಗವು ಪ್ರಾಕೃತವಾದರೆ ರುದ್ರನ ಯೋಗವು ಅಪ್ರಾಕೃತವಾಗಿದೆ. ಹಿರಣ್ಯಗರ್ಭನ ಯೋಗದ ಆರಂಭವು ಬುದ್ಧಿಯಿಂದ; ಮಹತ್ ಅಥವಾ ಬುದ್ಧಿಯು ಪ್ರಕೃತಿಯ ಮೊದಲನೆಯ ವಿಕೃತಿಯಾದುದರಿಂದ ಹಿರಣ್ಯಗರ್ಭನ ಯೋಗವು ಪ್ರಾಕೃತವೆಂದು ಹೇಳಿದರೆ ತಪ್ಪೇನು? ರುದ್ರನ ಯೋಗವು ಸ್ವಯಂಪ್ರಕಾಶವಾದ ಪರವಸ್ತುವಿನಲ್ಲಿ ಅವಿನಾಭಾವ ಸಾಮರಸ್ಯದಿಂದಿರುವ ಸ್ವವಿಮರ್ಶೆಯಿಂದ ಕೊನರೊಡೆಯುವದು. ಪ್ರಕೃತಿ, ಮಹತ್, ಅಹಂಕಾರ, ಮನ, ತನ್ಮಾತ್ರಾ, ಹಾಗೂ ಭೂತಗಳು ಈ ವಿಮರ್ಶೆ ಶಕ್ತಿಯ ಒಡಲೊಳಗಿಂದ ಒಡಮೂಡಿದ ಒಡವೆಗಳು. ಹೀಗೆ ಚಿತ್‌ಶಕ್ತಿಯ ಒಡಲೊಳಗಿಂದ ಒಡಮೂಡಿದ ಈ ಒಡವೆಗಳು ಮಾತೃಸ್ಥಾನದಿಂದ ದೂರ ಸರಿಯುತ್ತ ಹೋದಂತೆ ಅವುಗಳ ಪಾರದರ್ಶಕತೆಯು ಕಡಿಮೆಯಾಗುತ್ತ ಹೋಗುವದು, ಆದರೂ ಪರವಸ್ತುವಿನಲ್ಲಿದ್ದ ಪ್ರಕಾಶವು ಅದೆಷ್ಟೇ ಅಲ್ಪವಾದರೂ ಅದೆಷ್ಟೇ ಮಂದವಾದರೂ ಪರ ವಸ್ತುವಿನಿಂದ ಪ್ರಕಟವಾದ ಈ ಸೃಷ್ಟಿಯ ವಿವಿಧ ಪದಾರ್ಥಗಳಲ್ಲಿ ಪ್ರತಿಫಲಿಸುವದು. ಈ ಪ್ರತಿಫಲನದ ಪರಿಣಾಮದಿಂದಾಗಿ ಪರಿವರ್ತನೆಯು ಸಾಧ್ಯವಾಗುವದು. ವೀರಶೈವರ ಯೋಗಪದ್ಧತಿಯಲ್ಲಿ ಈ ಪರಿವರ್ತನೆಯು ಪ್ರಮುಖಸ್ಥಾನ ಪಡೆದಿದೆ. ಜೀವಭಾವವು ಶಿವಭಾವದಲ್ಲಿ ಪರಿವರ್ತನೆ ಹೊಂದಿ ಜೀವ ಪ್ರಪಂಚವೆಲ್ಲ ಶಿವಪ್ರಪಂಚವಾಗಿ ಮಾರ್ಪಡುವುದೇ ಶಿವಯೋಗದ ಗುರಿ. ಚಿತ್‌ಶಕ್ತಿಯಿಂದ ಆರಂಭವಾಗುವ ಯೋಗವು ದೇಹ, ಪ್ರಾಣ, ಮನ, ಬುದ್ಧಿಗಳನ್ನು ಅಲ್ಲಗಳೆಯದೆ ಅವುಗಳನ್ನು ಪರಿಶುದ್ಧಗೊಳಿಸುವದು ಚಿತ್‌ಶಕ್ತಿಯ ಸೋಂಕಿನಿಂದ ಅವೆಲ್ಲ ಪಾರದರ್ಶಕವಾಗುವವು ಹೀಗೆ ಪಾರದರ್ಶಕವಾದ ಅಂತಃಕರಣದಲ್ಲಿ ಆತ್ಮನ ಶಕ್ತಿಗಳೆಲ್ಲ ಪ್ರತಿಫಲಿಸುವವು. ಹಿರಣ್ಯಗರ್ಭನ ಯೋಗದಲ್ಲಿ ಪ್ರತಿಪ್ರಸವವಿದ್ದರೆ ರುದ್ರನ ಯೋಗದಲ್ಲಿ ಪ್ರತಿಫಲನವಿದೆ. ರುದ್ರನ ಈ ಯೋಗವು ಆಗಮಗಳಲ್ಲಿ ಅಲ್ಲಿಷ್ಟು ಇಲ್ಲಿಷ್ಟು ಪ್ರತಿಪಾದಿ



ಸಲ್ಪಟ್ಟಿದೆ. ಆದರೆ ಶ್ರೀ ಬಸವಾದಿ ಶರಣರು ಅವಕ್ಕೊಂದು ಸುವ್ಯವಸ್ಥಿತವಾದ ರೂಪವನ್ನು ಕೊಟ್ಟರು.

ಶ್ರೀ ಅರವಿಂದ ಯೋಗಿಗಳು ರುದ್ರನ ಈ ಯೋಗವನ್ನೇ ಎತ್ತಿ ಹಿಡಿದಿರುವರು. ಯೌಗಿಕ ಸಾಧನೆಯೆಂಬ ತಮ್ಮ ಗ್ರಂಥದಲ್ಲಿ ಅವರು ಮೊಟ್ಟಮೊದಲಿಗೆ ಹೀಗೆ ಹೇಳಿರುವರು. 'ಉಚಿತ ಸಾಧನ ಪದ್ಧತಿಯು ತೀರ ಭಿನ್ನವಾಗಿದೆ ಇದೀಗ ಬಹುಜನರು ಆಚರಿಸುವ ಹಾಗೂ ನೀವು ಸಹ ಮಾಡುತ್ತಿರುವ ಸಾಧನಪದ್ಧತಿಗೆ ಇದು ತುಂಬಾ ವಿಪರೀತವಾಗಿದೆ. ಸಾಧಕರು ದೇಹ ಇಲ್ಲವೆ ಪ್ರಾಣದಿಂದ ಆರಂಭಿಸಿ, ಚಿತ್ತ ಮನಸ್ಸುಗಳ ಮುಖಾಂತರ ಸಾಗಿ ಬುದ್ಧಿ ಮತ್ತು ಶಕ್ತಿಗೆ ಮುಗಿತಾಯಗೊಳಿಸುತ್ತಾರೆ. ಆದರೆ ನಿಜವಾದ ಸಾಧನಕ್ರಮವು ಶಕ್ತಿಯಿಂದ ಆರಂಭಿಸಿ ದೇಹಕ್ಕೆ ಮುಗಿಸುವದಾಗಿದೆ. ಆಸನ, ಪ್ರಾಣಾಯಾಮ, ಕುಂಭಕ, ಚಿತ್ತಶುದ್ಧಿ ಅಥವಾ ಇನ್ನಾವ ಪ್ರಾರಂಭಿಕ ಪಾಠ ಇವು ಯಾವವು ಶಕ್ತಿಯನ್ನು ಮೊದಲುಮಾಡಿಕೊಂಡು ಹೊರಡುವವರಿಗೆ ಅಗತ್ಯವಿಲ್ಲ.... ಯೋಗಿಗೆ ಅವಶ್ಯವಾಗಿ ಬೇಕಾದುದು ಸಂಕಲ್ಪಶಕ್ತಿಯೇ; ಆ ಸಂಕಲ್ಪಶಕ್ತಿಯನ್ನು ನೀವು ಮೊದಲಿಗೆ ಜಾಗ್ರತಗೊಳಿಸಿರಿ, ಆ ಶಕ್ತಿಯ ಮುಖಾಂತರವಾಗಿ ಜ್ಞಾನವನ್ನು ಸಂಪಾದಿಸಿರಿ. ಬಳಿಕ ಜ್ಞಾನದ ಸಹಾಯದಿಂದ ಚಿತ್ತವನ್ನು ಹಸನುಗೊಳಿಸಿರಿ. ಆಮೇಲೆ ಪ್ರಾಣವನ್ನು ಅಂಕಿತದಲ್ಲಿಟ್ಟುಕೊಂಡು ಮನವನ್ನು ಶಾಂತಗೊಳಿಸಿರಿ. ಕೊನೆಗೆ ಇವೆಲ್ಲವುಗಳ ನೆರವಿನಿಂದ ದೇಹವನ್ನು ಅಮರಗೊಳಿಸಿರಿ. ಇದುವೆ ವಾಸ್ತವಕವಾದ ಯೋಗವು, ಮಹಾಪಥವು ಇದುವೆ ನಿಜವಾದ ಏಕ ಮಾತ್ರ ತಂತ್ರವು ವೇದಾಂತವು ಬುದ್ಧಿಯನ್ನು ಮೊದಲುಮಾಡಿಕೊಂಡು ಹೊರಡುತ್ತದೆ; ಆಗಮಾಂತವು ಅಥವಾ ತಂತ್ರವು ಶಕ್ತಿಯಿಂದ ಆರಂಭಿಸಲ್ಪಡುತ್ತದೆ."

ಪಾತಂಜಲಿಯು ತನ್ನ ಯೋಗಸೂತ್ರದ ಕೊನೆಗೆ ಪುರುಷಾರ್ಥ ಶೂನ್ಯ ಗುಣಗಳ ಪ್ರತಿಪ್ರಸವವೇ ಕೈವಲ್ಯವೆಂದು ಹೇಳಿದ್ದಾನೆ. ಒಂದರಿಂದ ಎರಡು, ಎರಡರಿಂದ ಮೂರು ಮೂರರಿಂದ ನಾಲ್ಕು ಹೀಗೆ ಬಳಿವಿಡಿದು ಬೆಳೆದುಬಂದರೆ ಅದಕ್ಕೆ ಪ್ರಸವವೆನ್ನುವರು. ತದ್ವಿರುದ್ಧವಾಗಿ ನಾಲ್ಕನೇಯದು ಮೂರನೆಯದರಲ್ಲಿ, ಮೂರನೆಯದು ಎರಡನೆಯದರಲ್ಲಿ, ಎರಡನೆಯದು ಒಂದನೆಯದರಲ್ಲಿ ವಿಲೀನವಾಗುವುದಕ್ಕೆ ಪ್ರತಿಪ್ರಸವವೆನ್ನುವರು ಕಡೆಗೆ ತ್ರಿಗುಣಗಳ ಪರಿಣಾಮ ಪ್ರವಾಹಕ್ಕೆ ಯಾವ ಪ್ರೇರಕ ಹೇತುಗಳು ಉಳಿಯದ್ದರಿಂದ ಅವು ಪುರುಷಾರ್ಥ ಶೂನ್ಯವಾಗುತ್ತವೆ. ಸಾಂಖ್ಯದರ್ಶನಕ್ಕನುಗುಣವಾಗಿ ಮಹತ್ ಅಥವಾ ಬುದ್ಧಿಯು ಪ್ರಕೃತಿಯ ಮೊದಲನೆಯ ವಿಕೃತಿ ಮಹತ್ತತ್ತ್ವವು ತ್ರಿಗುಣಗಳ ಸ್ವರೂಪವಿರುವದರಿಂದ ಸಾತ್ವಿಕ, ತಾಮಸವೆಂಬ ಅಹಂಕಾರತ್ರಯವು ಉದಿಸಲನುವಾಯಿತು. ಸಾತ್ವಿಕ ಅಹಂಕಾರದಿಂದ ಅಂತಃಕರಣ, ಜ್ಞಾನೇಂದ್ರಿಯ ಪಂಚಕ; ರಾಜಸ ಅಹಂಕಾರದಿಂದ ಕರ್ಮೇಂದ್ರಿಯ ಪಂಚಕ; ತಾಮಸ ಅಹಂಕಾರ

ಪರಬ್ರಹ್ಮನ ಈ ಪರಶಿವನ ಕೂಡ ಅವಿನಾಭಾವ ಸಾಮರಸ್ಯದಿಂದಿರುವ ವಿಮರ್ಶೆಯು ಈ ವಿಮರ್ಶಶಕ್ತಿಯ ವಿಲಾಸವೇ ಒಂದೆಡೆಗೆ ಸೃಷ್ಟಿಯಾಗಿಯೂ ಇನ್ನೊಂದೆಡೆಗೆ ಜೀವ ಸಮುದಾಯವಾಗಿಯೂ ಕಂಗೊಳಿಸುವದು ವಿಮರ್ಶಶಕ್ತಿಯ ವಿಕಾಸದಿಂದ ಜೀವನು ತನ್ನ ಕರ್ತೃತ್ವಶಕ್ತಿಯನ್ನು ಕಲ್ಪಕ ವೃತ್ತಿಯನ್ನು ಬೆಳಗಿಸಿಕೊಂಡು, 'ಸ್ವರೂಪಜ್ಞಾನವನ್ನು ಪಡೆದು ಪರಶಿವನೊಡನೆ ಸಾಮರಸ್ಯವನ್ನು ಹೊಂದುವದೇ ಶಕ್ತಿ ವಿಶಿಷ್ಟಾದ್ವೈತಪರವಾದ ವೀರಶೈವ ದರ್ಶನದಲ್ಲಿ ಯೋಗವೆನ್ನಿಸಿಕೊಳ್ಳುವದು.

ಋಷಿಗಳಲ್ಲಿ ಕೆಲವರು ಪಶುಧರ್ಮಪರಾಯಣರೆಂದೂ ಹಲವರು ಪತಿಧರ್ಮ ಪರಾಯಣರೆಂದೂ ಹೇಳಲಾಗುತ್ತದೆ. ಶೈವಧರ್ಮದಲ್ಲಿ ಪ್ರಕೃತಿಗೆ ಇಲ್ಲವೆ ಜೀವನಿಗೆ ಪಶುವೆಂದೂ ಸಾಂಕೇತಿಕ ಅರ್ಥವಿದೆ, ಪಶುಧರ್ಮ ಪರಾಯಣರೆಂದರೆ ಪ್ರಾಕೃತ ಧರ್ಮಾವಲಂಬಿಗಳೆಂದೂ ಪತಿಧರ್ಮ ಪರಾಯಣರೆಂದರೆ ಅಪ್ರಾಕೃತ ಧರ್ಮಾವಲಂಬಿಗಳೆಂದೂ ಅರ್ಥವಾಗುವದು. ಇದಕ್ಕನುಗುಣವಾಗಿ ಯೋಗವಾದರೂ ಪ್ರಾಕೃತ ಅಪ್ರಾಕೃತವೆಂದು ಎರಡು ವಿಧವಾಗಿದೆ. ಹಿರಣ್ಯಗರ್ಭನ ಯೋಗವು ಪ್ರಾಕೃತವಾದರೆ ರುದ್ರನ ಯೋಗವು ಅಪ್ರಾಕೃತವಾಗಿದೆ. ಹಿರಣ್ಯಗರ್ಭನ ಯೋಗದ ಆರಂಭವು ಬುದ್ಧಿಯಿಂದ ; ಮಹತ್ ಅಥವಾ ಬುದ್ಧಿಯು ಪ್ರಕೃತಿಯ ಮೊದಲನೆಯ ವಿಕೃತಿಯಾದುದರಿಂದ ಹಿರಣ್ಯಗರ್ಭನ ಯೋಗವು ಪ್ರಾಕೃತವೆಂದು ಹೇಳಿದರೆ ತಪ್ಪೇನು ? ರುದ್ರನ ಯೋಗವು ಸ್ವಯಂಪ್ರಕಾಶವಾದ ಪರವಸ್ತುವಿನಲ್ಲಿ ಅವಿನಾಭಾವ ಸಾಮರಸ್ಯದಿಂದಿರುವ ಸ್ವವಿಮರ್ಶೆಯಿಂದ ಕೊನರೊಡೆಯುವದು. ಪ್ರಕೃತಿ, ಮಹತ್, ಅಹಂಕಾರ, ಮನ, ತನ್ಮಾತ್ರಾ, ಹಾಗೂ ಭೂತಗಳು ಈ ವಿಮರ್ಶೆ ಶಕ್ತಿಯ ಒಡಲೊಳಗಿಂದ ಒಡಮೂಡಿದ ಒಡವೆಗಳು. ಹೀಗೆ ಚಿತ್‌ಶಕ್ತಿಯ ಒಡಲೊಳಗಿಂದ ಒಡಮೂಡಿದ ಈ ಒಡವೆಗಳು ಮಾತೃಸ್ಥಾನದಿಂದ ದೂರ ಸರಿಯುತ್ತ ಹೋದಂತೆ ಅವುಗಳ ಪಾರದರ್ಶಕತೆಯು ಕಡಿಮೆಯಾಗುತ್ತ ಹೋಗುವದು, ಆದರೂ ಪರವಸ್ತುವಿನಲ್ಲಿದ್ದ ಪ್ರಕಾಶವು ಅದೆಷ್ಟೇ ಅಲ್ಪವಾದರೂ ಅದೆಷ್ಟೇ ಮಂದವಾಸರೂ ಪರ ವಸ್ತುವಿನಿಂದ ಪ್ರಕಟವಾದ ಈ ಸೃಷ್ಟಿಯ ವಿವಿಧ ಪದಾರ್ಥಗಳಲ್ಲಿ ಪ್ರತಿಫಲಿಸುವದು. ಈ ಪ್ರತಿಫಲನದ ಪರಿಣಾಮದಿಂದಾಗಿ ಪರಿವರ್ತನೆಯು ಸಾಧ್ಯವಾಗುವದು. ವೀರಶೈವರ ಯೋಗಪದ್ಧತಿಯಲ್ಲಿ ಈ ಪರಿವರ್ತನೆಯು ಪ್ರಮುಖಸ್ಥಾನ ಪಡೆದಿದೆ. ಜೀವಭಾವವು ಶಿವಭಾವದಲ್ಲಿ ಪರಿವರ್ತನೆ ಹೊಂದಿ ಜೀವ ಪ್ರಪಂಚವೆಲ್ಲ ಶಿವಪ್ರಪಂಚವಾಗಿ ಮಾರ್ಪಡುವುದೇ ಶಿವಯೋಗದ ಗುರಿ. ಚಿತ್‌ಶಕ್ತಿಯಿಂದ ಆರಂಭವಾಗುವ ಯೋಗವು ದೇಹ, ಪ್ರಾಣ, ಮನ, ಬುದ್ಧಿಗಳನ್ನು ಅಲ್ಲಗಳೆಯದೆ ಅವುಗಳನ್ನು ಪರಿಶುದ್ಧಗೊಳಿಸುವದು ಚಿತ್‌ಶಕ್ತಿಯ ಸೋಂಕಿನಿಂದ ಅವೆಲ್ಲ ಪಾರದರ್ಶಕವಾಗುವವು ಹೀಗೆ ಪಾರದರ್ಶಕವಾದ ಅಂತಃಕರಣದಲ್ಲಿ ಆತ್ಮನ ಶಕ್ತಿಗಳೆಲ್ಲ ಪ್ರತಿಫಲಿಸುವವು. ಹಿರಣ್ಯಗರ್ಭನ ಯೋಗದಲ್ಲಿ ಪ್ರತಿಪ್ರಸವವಿದ್ದರೆ ರುದ್ರನ ಯೋಗದಲ್ಲಿ ಪ್ರತಿಫಲನವಿದೆ. ರುದ್ರನ ಈ ಯೋಗವು ಆಗಮಗಳಲ್ಲಿ ಅಲ್ಲಿಷ್ಟು ಇಲ್ಲಿಷ್ಟು ಪ್ರತಿಪಾದಿ



ಸಲ್ಪಟ್ಟಿದೆ. ಆದರೆ ಶ್ರೀ ಬಸವಾದಿ ಶರಣರು ಅದಕ್ಕೊಂದು ಸುವ್ಯವಸ್ಥಿತವಾದ ರೂಪವನ್ನು ಕೊಟ್ಟರು.

ಶ್ರೀ ಅರವಿಂದ ಯೋಗಿಗಳು ರುದ್ರನ ಈ ಯೋಗವನ್ನೇ ಎತ್ತಿ ಹಿಡಿದಿರುವರು. ಯೌಗಿಕ ಸಾಧನೆಯೆಂಬ ತಮ್ಮ ಗ್ರಂಥದಲ್ಲಿ ಅವರು ಮೊಟ್ಟಮೊದಲಿಗೆ ಹೀಗೆ ಹೇಳಿರುವರು. 'ಉಚಿತ ಸಾಧನ ಪದ್ಧತಿಯು ತೀರ ಭಿನ್ನವಾಗಿದೆ ಇದೀಗ ಬಹುಜನರು ಆಚರಿಸುವ ಹಾಗೂ ನೀವು ಸಹ ಮಾಡುತ್ತಿರುವ ಸಾಧನಪದ್ಧತಿಗೆ ಇದು ತುಂಬಾ ವಿಪರೀತವಾಗಿದೆ. ಸಾಧಕರು ದೇಹ ಇಲ್ಲವೆ ಪ್ರಾಣದಿಂದ ಆರಂಭಿಸಿ, ಚಿತ್ತ ಮನಸ್ಸುಗಳ ಮುಖಾಂತರ ಸಾಗಿ ಬುದ್ಧಿ ಮತ್ತು ಶಕ್ತಿಗೆ ಮುಗಿತಾಯಗೊಳಿಸುತ್ತಾರೆ. ಆದರೆ ನಿಜವಾದ ಸಾಧನಕ್ರಮವು ಶಕ್ತಿಯಿಂದ ಆರಂಭಿಸಿ ದೇಹಕ್ಕೆ ಮುಗಿಸುವದಾಗಿದೆ. ಆಸನ, ಪ್ರಾಣಾಯಾಮ, ಕುಂಭಕ, ಚಿತ್ತಶುದ್ಧಿ ಅಥವಾ ಇನ್ನಾವ ಪ್ರಾರಂಭಿಕ ಪಾಟ ಇವು ಯಾವವು ಶಕ್ತಿಯನ್ನು ಮೊದಲುಮಾಡಿಕೊಂಡು ಹೊರಡುವವರಿಗೆ ಅಗತ್ಯವಿಲ್ಲ.... ಯೋಗಿಗೆ ಅವಶ್ಯವಾಗಿ ಬೇಕಾದುದು ಸಂಕಲ್ಪಶಕ್ತಿಯೇ ; ಆ ಸಂಕಲ್ಪಶಕ್ತಿಯನ್ನು ನೀವು ಮೊದಲಿಗೆ ಜಾಗೃತಗೊಳಿಸಿರಿ, ಆ ಶಕ್ತಿಯ ಮುಖಾಂತರವಾಗಿ ಜ್ಞಾನವನ್ನು ಸಂಪಾದಿಸಿರಿ. ಬಳಿಕ ಜ್ಞಾನದ ಸಹಾಯದಿಂದ ಚಿತ್ತವನ್ನು ಹಸನುಗೊಳಿಸಿರಿ. ಆಮೇಲೆ ಪ್ರಾಣವನ್ನು ಅಂಕಿತದಲ್ಲಿಟ್ಟುಕೊಂಡು ಮನವನ್ನು ಶಾಂತಗೊಳಿಸಿರಿ. ಕೊನೆಗೆ ಇವೆಲ್ಲವುಗಳ ನೆರವಿನಿಂದ ದೇಹವನ್ನು ಅಮರಗೊಳಿಸಿರಿ. ಇದುವೆ ವಾಸ್ತವಕವಾದ ಯೋಗವು, ಮಹಾಪಥವು ಇದುವೆ ನಿಜವಾದ ಏಕ ಮಾತ್ರ ತಂತ್ರವು ವೇದಾಂತವು ಬುದ್ಧಿಯನ್ನು ಮೊದಲುಮಾಡಿಕೊಂಡು ಹೊರಡುತ್ತದೆ ; ಆಗಮಾಂತವು ಅಥವಾ ತಂತ್ರವು ಶಕ್ತಿಯಿಂದ ಆರಂಭಿಸಲ್ಪಡುತ್ತದೆ."

ಪಾತಂಜಲಿಯು ತನ್ನ ಯೋಗಸೂತ್ರದ ಕೊನೆಗೆ ಪುರುಷಾರ್ಥ ಶೂನ್ಯ ಗುಣಗಳ ಪ್ರತಿಪ್ರಸವವೇ ಕೈವಲ್ಯವೆಂದು ಹೇಳಿದ್ದಾನೆ. ಒಂದರಿಂದ ಎರಡು, ಎರಡರಿಂದ ಮೂರು ಮೂರರಿಂದ ನಾಲ್ಕು ಹೀಗೆ ಬಳಿವಿಡಿದು ಬೆಳೆದುಬಂದರೆ ಅದಕ್ಕೆ ಪ್ರಸವವೆನ್ನುವರು. ತದ್ವಿರುದ್ಧವಾಗಿ ನಾಲ್ಕನೇಯದು ಮೂರನೆಯದರಲ್ಲಿ, ಮೂರನೆಯದು ಎರಡನೆಯವರಲ್ಲಿ, ಎರಡನೆಯದು ಒಂದನೆಯದರಲ್ಲಿ ವಿಲೀನವಾಗುವುದಕ್ಕೆ ಪ್ರತಿಪ್ರಸವವೆನ್ನುವರು ಕಡೆಗೆ ತ್ರಿಗುಣಗಳ ಪರಿಣಾಮ ಪ್ರವಾಹಕ್ಕೆ ಯಾವ ಪ್ರೇರಕ ಹೇತುಗಳು ಉಳಿಯದ್ದರಿಂದ ಅವು ಪುರುಷಾರ್ಥ ಶೂನ್ಯವಾಗುತ್ತವೆ. ಸಾಂಖ್ಯದರ್ಶನಕ್ಕನುಗುಣವಾಗಿ ಮಹತ್ ಅಥವಾ ಬುದ್ಧಿಯು ಪ್ರಕೃತಿಯ ಮೊದಲನೆಯ ವಿಕೃತಿ ಮಹತ್ತತ್ತ್ವವು ತ್ರಿಗುಣಗಳ ಸ್ವರೂಪವಿರುವದರಿಂದ ಸಾತ್ವಿಕ, ತಾಮಸವೆಂಬ ಅಹಂಕಾರತ್ರಯವು ಉದಿಸಲಸುವಾಯಿತು. ಸಾತ್ವಿಕ ಅಹಂಕಾರದಿಂದ ಅಂತಃಕರಣ, ಜ್ಞಾನೇಂದ್ರಿಯ ಪಂಚಕ ; ರಾಜಸ ಅಹಂಕಾರದಿಂದ ಕರ್ಮೇಂದ್ರಿಯ ಪಂಚಕ ; ತಾಮಸ ಅಹಂಕಾರ

ಯಿಂದ ಪಂಚತನ್ಮಾತ್ರಾ ಹಾಗೂ ಸ್ಥೂಲಪಂಚಕ ನಿರ್ಮಿತವಾಗಿವೆ. ನಿರೋಧ ಸಂಸ್ಕಾರಗಳ ಪರಿಣಾಮ ಪ್ರವಾಹವು ಮುಗಿದೊಡನೆಯೆ ಇವೆಲ್ಲವು ತಮ್ಮ ಉಪಾದಾನಕಾರಣವಾದ ತ್ರಿಗುಣಗಳಲ್ಲಿ ವಿಲೀನವಾಗುತ್ತವೆ. ತ್ರಿಗುಣಗಳ ಸಾಮ್ಯಾವಸ್ಥೆಯು ಸಮನಿಸಿದರೆ ದೃಶ್ಯಾದೃಶ್ಯಗಳ ಸಂಯೋಗದ ಅಭಾವವು ಲಭಿಸಿ ಚಿತ್‌ಶಕ್ತಿರೂಪ ಚೇತನ ಪುರುಷನು ತನ್ನ ಸ್ವರೂಪದಲ್ಲಿ ಪ್ರತಿಷ್ಠಿತನಾಗುತ್ತಾನೆ. ಇಲ್ಲಿಗೆ ಹಿರಣ್ಯಗರ್ಭನ ಯೋಗವು ಮುಗಿಯುತ್ತದೆ ; ಆದರೆ ಚಿತ್‌ಶಕ್ತಿರೂಪ ಚೈತನ್ಯಪುರುಷನ ಸಂಕಲ್ಪಶಕ್ತಿಯಿಂದಲೇ ರುದ್ರನ ಯೋಗವು ಅಥವಾ ಶಿವಯೋಗವು ಆರಂಭವಾಗುತ್ತದೆ.

ಯೋಗವೆಂದರೇನು ? ಸಮಾಧಿ, ಸಂಯೋಗ, ಧ್ಯಾನ, ಕರ್ಮಕೌಶಲವೆಂದು ಹಲವು ಬಗೆಯಾಗಿ ಯೋಗವನ್ನು ವ್ಯಾಖ್ಯಾನಿಸುವದುಂಟು ಆದರೆ ಯೋಗದ ಸರಳವಾದ, ಸುಂದರವಾದ, ಸುಲಲಿತವಾದ ಅರ್ಥವೆಂದರೆ ಸಾಧನೆ. ಭಿನ್ನಭಿನ್ನ ಸಾಂಪ್ರದಾಯಗಳಿಗನುಗುಣವಾದ ಭಿನ್ನಭಿನ್ನವಾದ ಸಾಧನೆಗಳಿರುವದು ಸಹಜವಷ್ಟೆ ! ಇದರಿಂದಾಗಿ ಯೋಗಪರಂಪರೆಯಲ್ಲಿ ಹಲವಾರು ಯೋಗಗಳ ಉಲ್ಲೇಖವು ಕಂಡುಬರುತ್ತದೆ ಹಲವಾರು ಯೋಗಗಳ ಉಲ್ಲೇಖವಿದ್ದರೂ ಹಟಯೋಗ ಹಾಗೂ ರಾಜಯೋಗಗಳು ಮಹತ್ವದವುಗಳೆಂದು ಪರಿಗಣಿಸಲಾಗಿದೆ. ಹಟಯೋಗ ಪ್ರದೀಪಿಕೆಯು ಹಟಯೋಗದ ಸಕೀಲವನ್ನು ತಿಳಿಸಿದರೆ ಪಾತಂಜಲ ಯೋಗಸೂತ್ರವು ರಾಜಯೋಗದ ರಹಸ್ಯವನ್ನು ಬೋಧಿಸುತ್ತದೆ. ವೃತ್ತಿಗಿಂತ ಪ್ರಾಣವು ಅಧಿಕವೆಂದೂ ವೃತ್ತಿಯು ಪ್ರಾಣವನ್ನು ಹಿಂಬಾಲಿಸುವದೆಂದೂ ರಾಜಯೋಗವು ತಿಳಿಸುವದು ಪ್ರಾಣನಿರೋಧವು ಹಟಯೋಗದ ತಿರುಳಾದರೆ ವೃತ್ತಿ ನಿರೋಧವು ರಾಜಯೋಗದ ರಹಸ್ಯವಾಗಿದೆ. ಆದರೆ ಶಿವಯೋಗವು ಇವೆರಡಕ್ಕಿಂತಲೂ ಭಿನ್ನವಾಗಿದೆ. ಅದು ನೇರವಾಗಿ ಚಿತ್‌ಶಕ್ತಿ ಇಲ್ಲವೆ ಶುದ್ಧ ಸಂಕಲ್ಪ ಶಕ್ತಿಯಿಂದ ಆರಂಭವಾಗುತ್ತದೆ. ಈ ಚಿತ್‌ಶಕ್ತಿಯು ಪ್ರಾಣ ಹಾಗು ವೃತ್ತಿಗಳಿಗಿಂತ ಭಿನ್ನವಾಗಿ ಅವೆರಡಕ್ಕಿಂತ ವಿಶೇಷವಾಗಿರುತ್ತದೆ. ಈ ಸೃಷ್ಟಿಯಾಗಲಿ ಇದರಲ್ಲಿ ಕಂಡು ಬರುವ ವಿವಿಧ ತತ್ವಗಳಾಗಲಿ ಈ ಚಿತ್‌ಶಕ್ತಿಯ ಆವಿರ್ಭಾವವೆ ಹೊರತು ಆಭಾಸವಲ್ಲ ಕ್ರಮಿಕ ತರಗತಿಯಿಂದ ಈ ಸೃಷ್ಟಿಯಲ್ಲಿ ಏಳು ಮುಖ್ಯವಾದ ತತ್ವಗಳು ಕಂಗೊಳಿಸುತ್ತವೆ ಪೃಥ್ವಿ, ಅಪ್ಪು, ಅಗ್ನಿ, ವಾಯು, ಆಕಾಶ, ಆತ್ಮ, ಪರಮಾತ್ಮ ಇವೇ ಆ ಏಳು ತತ್ವಗಳು. ಪೃಥ್ವಿಯಲ್ಲಿ ಧಾರಣ ಶಕ್ತಿಯಿದೆ, ಅಪ್ಪುವಿನಲ್ಲಿ ಆಪ್ಯಾಯನ ಶಕ್ತಿಯಿದೆ, ಅಗ್ನಿಯಲ್ಲಿ ಜ್ವಲನ ಶಕ್ತಿಯಿದೆ, ವಾಯುವಿನಲ್ಲಿ ಸಂಚಲನ ಶಕ್ತಿಯಿದೆ, ಆಕಾಶದಲ್ಲಿ ವ್ಯಾಪನ ಶಕ್ತಿಯಿದೆ, ಆತ್ಮನಲ್ಲಿ ಬುದ್ಧಿಶಕ್ತಿ ಇದೆ. (ಸಾಂಖ್ಯರು ಹೇಳುವಂತೆ ಪ್ರಕೃತಿಯಲ್ಲಿ ಅಲ್ಲ-) ಪರಮಾತ್ಮನಲ್ಲಿ ಚಿತ್‌ಶಕ್ತಿಯಿದೆ. ಶಿವಯೋಗವು ಈ ಚಿತ್‌ಶಕ್ತಿಯಿಂದ ಆರಂಭವಾಗಿ ಕ್ರಮೇಣವಾಗಿ ಎಲ್ಲಂದದ ಶಕ್ತಿಗಳನ್ನು ಉನ್ನತಗೊಳಿಸುತ್ತ ಸೃಷ್ಟಿಯ ಸೊಬಗನ್ನು ಸೌಂದರ್ಯವನ್ನು ಸವಿಯಕಲಿಸುವದು, ಆಗ ಸೃಷ್ಟಿಯು ಮೂರು ದಿನದ ಸಂತೆಯಾಗದೆ ಮಾರ್ಮಲಿತ ಶಾಂತಿಯ ಪ್ರತೀಕವಾಗಿ ಪರಿಣಮಿಸುವದು ; ಆಗ ಅದು



ಬರಿಯ ಕಲ್ಪನೆಯಾಗದೆ ಚಿತ್‌ಕಲೆಯಾಗಿ ಕಂಗೊಳಿಸುವದು. ಇಂತಹ ಚಿತ್‌ಕಲೆಯನ್ನು ಅಂಗಕ್ಕೆ ಅಳವಡಿಸಿಕೊಳ್ಳುವ ವಿಧಾನವನ್ನು ತಿಳಿಸಿಹೇಳುವದು ಶಿವಯೋಗವು.

ಮೊಹೆಂಜೋದಾರೊ-ಹರಪ್ಪಾದ ಅಗೆತಗಳಲ್ಲಿ ದೊರೆತ ಅವಶೇಷಗಳನ್ನು ನಾನು ಅಭ್ಯಾಸ ಮಾಡತೊಡಗಿದೆನು. ಸಂಶೋಧನ ದೃಷ್ಟಿಯಿಂದ ಅವುಗಳ ಅಭ್ಯಾಸವನ್ನು ಮುಂದುವರಿಸಿದಂತೆ ಮೊಹೆಂಜೊದಾರೋ-ಹರಪ್ಪಾ ಕ್ಷೇತ್ರವು ದ್ರಾವಿಡ, ಕೋಲ, ಮುಂಡ, ಸುಮೇರಿಯಾ, ಕಾಲ್ಡಿಯಾ ಇತ್ಯಾದಿ ಸಂಸ್ಕೃತಿಗಳ ರಂಗಸ್ಥಲವಾಗಿದ್ದಿತೆಂದು ಕಂಡುಬಂದಿತು. ವೇದಗಳಲ್ಲಿ ಶಿಶ್ನದೇವಾ ಎಂಬ ಪದವು ಎರಡು ಸಲ ಬಂದಿದೆ. ಹಲವಾರು ಪಂಡಿತರು ಅಪಾರ್ಥವನ್ನು ಕಲ್ಪಿಸಿದ್ದಾರೆ, ಇನ್ನೂ ಕಲ್ಪಿಸುತ್ತಲೇ ಇದ್ದಾರೆ. ಆದರೆ ಸುಮೇರು ಭಾಷೆಯಲ್ಲಿ ಶಿಶ್ನವೆಂದರೆ ಏಳು ಎಂಬ ಅರ್ಥವಿದೆ ಎಂದು ನನ್ನ ಸಂಶೋಧನೆಯ ಫಲವಾಗಿ ನನಗೆ ಹೊಳೆದಾಗ ನನ್ನ ಮೈ ಪುನಗಳೆದ್ದು ತೂಗಿ ತೊನೆದಾಡಿದವು. ಶಿಶ್ನದೇವಾ ಎಂದರೆ ಏಳು ದೇವತೆಗಳು, ಹೇಗಂದರೇನು ? ಒಂದೊಂದು ತತ್ವಕ್ಕೆ ಒಂದೊಂದು ಅಧಿದೇವತೆಯನ್ನೊ ಒಂದೊಂದು ಶಕ್ತಿಯನ್ನೊ ಕಲ್ಪಿಸುವದು ಯೋಗಶಾಸ್ತ್ರದಲ್ಲಿ ಬಹಳ ಪ್ರಾಚೀನ ಕಾಲದಿಂದಲೂ ನಡೆದುಬಂದ ಸಂಪ್ರದಾಯ. ಯೋಗವಿದ್ಯೆಯಲ್ಲಿ ಅಪಾರವಾದ ಸಾಮರ್ಥ್ಯವಿರುವುದರಿಂದ, ಅಂತಹ ಸಾಮರ್ಥ್ಯವು ಅನಧಿಕಾರಿಗಳ ಸೊತ್ತಾಗಬಾರದೆಂದು ಬಗೆದು, ಯೋಗಶಾಸ್ತ್ರವನ್ನು ಬಹಳ ರಹಸ್ಯವಾಗಿಟ್ಟು, ಅದರ ವಿಧಿವಿಧಾನಗಳನ್ನು ಸಾಂಕೇತಿಕ ಪದಗಳಿಂದ ಪ್ರಯೋಗಿಸತೊಡಗಿದರು ಪುರಾತನರು. ಶಿಶ್ನದೇವಾ ಎಂಬ ಪದವು ಅಂತಹ ಪದಗಳಲ್ಲಿ ಒಂದು. ಪೃಥ್ವಿ, ಅಪ್ಪು, ಅಗ್ನಿ, ವಾಯು, ಆಕಾಶ, ಆತ್ಮ, ಪರಮಾತ್ಮ ಎಂಬ ಏಳು ತತ್ವಗಳಲ್ಲಿ ಏಳು ಬಗೆಯ ಶಕ್ತಿಗಳನ್ನು ಆತ್ಮಸಾತ್ ಮಾಡಿಕೊಂಡರು ಯೋಗಿಗಳು. ಕೊನೆಯ ಶಕ್ತಿಯಾದ ಚಿತ್‌ಶಕ್ತಿಯ ವಲ್ಲಭನೆ ಶಿವನು. ಶಿಶ್ನದೇವಾ ಎಂದರೆ ಸಪ್ತತತ್ವಗಳ, ಸಪ್ತಲೋಕಗಳ ಸಪ್ತಪ್ರಜ್ಞಾ ಭೂಮಿಕೆಗಳ, ಅಧಿಪತಿಯಾದ ಶಿವನೆಂದೆ ಅರ್ಥವಾಗುವದು. ಶಿವಾಗಮಗಳು ಈ ಮಾತಿನ ಸತ್ಯತೆಯನ್ನು ಎತ್ತಿ ಹಿಡಿಯುತ್ತವೆ. ಪೃಥ್ವಿ, ಅಪ್ಪು, ಅಗ್ನಿ, ವಾಯು, ಆಕಾಶ, ಆತ್ಮ, ಪರಮಾತ್ಮ ಎಂಬ ಏಳು ತತ್ವಗಳಾಗಲಿ ; ಭೂರ್ಲೋಕ, ಭುವರ್ಲೋಕ, ಸ್ವರ್ಲೋಕ, ಮಹರ್ಲೋಕ, ಜ್ಞಾನಲೋಕ, ತಪೋಲೋಕ, ಸತ್ಯಲೋಕವೆಂಬ ಏಳು ಲೋಕಗಳಾಗಲಿ ಸ್ಥೂಲ, ಸೂಕ್ಷ್ಮ, ಕಾರಣ, ಮಹಾಕಾರಣ, ಆನಂದ, ಚಿತ್, ಸತ್ ಎಂಬ ಏಳು ಅರುಹಿನ ಅವಸ್ಥೆಗಳಾಗಲಿ ಶಬ್ದಗಳಿಂದ ಬೇರೆಯೆ ವಿನಹ ಅರ್ಥತಃ ಒಂದೇ ಆಗಿವೆ. ಯೋಗವೆಂದರೆ ಸಾಧನೆ ಸಾಧನಾಕ್ರಮವು ತನ್ನಿಂದಲೇ ತನ್ನ ದೇಹದಿಂದಲೆ ಆರಂಭವಾಗಬೇಕಾಗುವದರಿಂದ ಎಲ್ಲ ತತ್ವಗಳು, ಎಲ್ಲ ದೇವತೆಗಳು, ಎಲ್ಲ ಅರುಹಿನ ಅವಸ್ಥೆಗಳು ತನ್ನಲ್ಲಿಯೆ, ತನ್ನ ದೇಹದಲ್ಲಿಯೆ, ತನ್ನ ಪಿಂಡದಲ್ಲಿಯೆ ಪ್ರತಿಷ್ಠಿತವಾಗಿವೆಯೆಂದು ಯೋಗಶಾಸ್ತ್ರವು ಹೇಳುವದು. ತನ್ನ ಬಿಟ್ಟು ದೇವರಿಲ್ಲ, ಮಣ್ಣ ಬಿಟ್ಟು ಮಡಕೆಯಿಲ್ಲ, ಎಂಬ ಸಾಮಾನ್ಯ

ವಾದ ನಾಣ್ಣುಡಿಯಲ್ಲಿ ಈ ಮಾತಿನ ಸತ್ಯತೆಯನ್ನು ನಾವು ಕಾಣಬಹುದು. ದೇಹದಲ್ಲಿಯೆ ದೇವನಿರುವನೆಂದೂ ಮನದ ಕೊನೆಯ ಮೊನೆಯ ಮೇಲೆ ಮಹಾದೇವನು ಮನೆಯ ಮಾಡಿಕೊಂಡಿರುವನೆಂದೂ ಶ್ರೀ ಬಸವಣ್ಣ, ಪ್ರಭುದೇವರು ಮುಂತಾದ ಶರಣರು ತಮ್ಮ ವಚನಗಳಲ್ಲಿ ಹಾಡಿಕೊಂಡಿಲ್ಲವೆ? ಯೋಗಶಾಸ್ತ್ರವು ದೇಹದಲ್ಲಿ ಬಗೆ ಬಗೆಯ ಚಕ್ರಗಳಿವೆಯೆಂದು ಹೇಳುವದು. ವಿಶುದ್ಧಿ ಚಕ್ರದಲ್ಲಿ ಮನವಿದೆ ವಿಶುದ್ಧಿ ಚಕ್ರದ ಕೊನೆಯೆ ಆಜ್ಞಾ ಚಕ್ರ, ಅದರ ಮೊನೆಯೆ ಸಹಸ್ರಾರ. ಮನದ ಕೊನೆಯ ಮೊನೆಯಂದರೆ ಸಹಸ್ರಾರವೆಂದರ್ಥ. ಈ ಸಹಸ್ರಾರದಲ್ಲಿ ಶಿವನು ಅಥವಾ ಪುರುಷನು ನೆಲೆಸಿರುವದು; ಅರ್ಥಾತ್ ಪರಶಿವನು ಸಾಸಿರದಳ ಪದ್ಮಾಸನನಾಗಿಹನು ಮಾನವನ ದೇಹದಲ್ಲಿರುವ ಈ ಪರಾತ್ಪರನಿಗೆ ದ್ರಷ್ಟಾ, ಅನುಮಂತಾ, ಭರ್ತಾ, ಭೋಕ್ತಾ, ಮಹೇಶ್ವರ, ಪರಮಾತ್ಮ, ಪರಶಿವ ಎಂಬ ವಿವಿಧ ಶಬ್ದಗಳನ್ನು ಪ್ರಯೋಗಿಸಲಾಗಿದೆಯಷ್ಟೇ. ದೇಹಸ್ಥ ಪುರುಷನಿಗೆ ಮಹೇಶ್ವರನೆಂದೂ ಪರಮಾತ್ಮನೆಂದೂ ಪರಶಿವನೆಂದೂ ಹೇಳುವದಾದರೆ ಆತನ ಶಕ್ತಿಯಾದ ಚಿತ್‌ಶಕ್ತಿಗೆ ದೇಹಸ್ಥ ಪರಮೇಶ್ವರಿ ಎಂದು ಹೇಳಲಿಕ್ಕೆ ಆತಂಕವೇನು? ಅವಳು ಪರಶಿವನೊಡನೆ ಸಾಮರಸ್ಯದಿಂದಿದ್ದು ಸಹಸ್ರದಳದ ಪದ್ಮದಲ್ಲಿ ಜಾಗ್ರತಳಾಗಿಯೂ ಕೆಳಗಿನ ಉಳಿದೆಲ್ಲ ಚಕ್ರಗಳಲ್ಲಿ ಸುಪ್ತಳಾಗಿಯೂ ಇರುತ್ತಾಳೆಂದು ತಾಂತ್ರಿಕ ಗ್ರಂಥಗಳು ಹೇಳುತ್ತವೆ. ಆದರೆ ವೀರಶೈವರು ಮಾತ್ರ ಉಳಿದ ಯಾವ ಚಕ್ರಗಳ ಗೋಜಿಗೆ ಹೋಗದೆ ಆಜ್ಞಾ ಚಕ್ರ ಅಥವಾ ಭ್ರೂಮಧ್ಯ ಒಂದರ ಮೇಲೆಯೇ ಲಕ್ಷ್ಯವನ್ನು ಕೇಂದ್ರೀಕರಿಸಿ ಭ್ರೂಮಧ್ಯದಲ್ಲಿದ್ದ ಆತ್ಮತತ್ವವನ್ನು ಚಿತ್‌ಕಳೆಯಿಂದ ಜಾಗ್ರತಗೊಳಿಸಿ ಆ ಚಿತ್‌ಪ್ರಕಾಶವು ಪಂಚೇಂದ್ರಿಯಗಳ ಮೂಖಾಂತರ ಪ್ರಜ್ವಲಿಸುವಂತೆ ಮಾಡುವರು. ವೀರಶೈವರ ಶಿವಯೋಗಕ್ಕೂ ತಾಂತ್ರಿಕರ ಶಕ್ತಿಯೋಗಕ್ಕೂ ಇರುವ ಅಂತರವು ಇಲ್ಲಿ ಒಡೆದು ಕಾಣುವದು.

ಕಾಮಿಕ ಮೊದಲಾಗಿ ವಾತುಲಕಡೆಯಾದ ಇಪ್ಪತ್ತೆಂಟು ಶಿವಾಗಮಗಳಲ್ಲಿ ಜ್ಞಾನ, ಜ್ಞೇಯ, ಅನುಷ್ಠೇಯ ಅಧಿಕಾರಿ, ಸಾಧನ, ಸಾಧ್ಯಗಳೆಂಬ ಷಟ್‌ಪದಾರ್ಥಗಳ ಬೋಧನೆ ಮುಖ್ಯವಾಗಿರುವದು. ಇಲ್ಲಿ ಜ್ಞಾನವೆಂದರೆ ಪ್ರಕೃತಿ ಜ್ಞಾನವಲ್ಲ, ಅವಬೋಧರೂಪ ಜ್ಞಾನವು. ಜ್ಞಾನವು ಅವಬೋಧರೂಪವೆಂದು ಶಬ್ದರೂಪವೆಂದು ಎರಡು ಬಗೆಯಾಗಿದೆ. ಅವಬೋಧರೂಪ ಜ್ಞಾನವು ಸ್ಫುರಣಾತ್ಮಕವಾದರೆ ಶಬ್ದರೂಪ ಜ್ಞಾನವು ತರ್ಕಾತ್ಮಕವಾಗಿದೆ. ಅವಬೋಧರೂಪವಾದ ವಿಮಲ ಜ್ಞಾನವು ನಾದರೂಪದಿಂದ ಹೊರಹೊಮ್ಮಿ ಶಬ್ದರೂಪವನ್ನು ತಾಳುವದು. ಅತ್ಯಂತ ಸೂಕ್ಷ್ಮವಾದ ನಾದವು ಅವಬೋಧರೂಪ ಜ್ಞಾನದಲ್ಲಿ ಅವ್ಯಕ್ತವಾಗಿರುವದು. ಹೀಗೆ ಅವ್ಯಕ್ತವಾದ ನಾದಕ್ಕೆ ಪರ ಎಂದು ಸಂಜ್ಞೆಯುಂಟು. ಈ ಪರ ನಾದದ ವ್ಯಕ್ತತೆಯೆ ಸ್ಫೋಟವು. ಸ್ಫೋಟವೆಂದರೆ ಶಬ್ದ ಆದರೆ ಬರಿಯ ಶಬ್ದವಲ್ಲ ಮೂಲ ಪ್ರಣವಾತ್ಮಕ ಶಬ್ದ. ಈ ಪ್ರಣವವು ಮಾನವ ದೇಹದ ಭ್ರೂಮಧ್ಯದಲ್ಲಿ ಪ್ರತಿಷ್ಠಿತವಾಗಿರುವದು. ಈ ಪ್ರಣವಕ್ಕೆ



ವೀರಶೈವ ಪ್ರಕ್ರಿಯೆಯಲ್ಲಿ ಮಹಾಲಿಂಗನೆಂಬ ಹೆಸರಿದೆ, "ಅನೇನಾವ ಗಮ್ಯತೆ ಸ್ವರಂ ಇತ್ಯಾಗಮಃ" ಎಂದು ಮನು ಆಗಮದ ವ್ಯಾಖ್ಯೆಯನ್ನು ಹೇಳಿರುವನು. ಎಲ್ಲವನ್ನು ಬೆಳಗುವ ಪರವಸ್ತುವಿನಲ್ಲಿ ಸ್ವತಃ ಸಿದ್ಧವಾದ ಅವಬೋಧರೂಪ ಜ್ಞಾನವೆ ಆಗಮ. ಸಹಸ್ರಾರದಲ್ಲಿ ಅತ್ಯಂತ ಸೂಕ್ಷ್ಮರೂಪದಿಂದ ನೆಲಸಿದ ಅವಬೋಧರೂಪವಾದ ವಿಮಲ ಜ್ಞಾನವು ಭ್ರೂಮಧ್ಯಕ್ಕೆ ಇಳಿದು ಬಂದು ಪಂಚ ಸ್ರೋತರೂಪದಿಂದ ಪಂಚ ಜ್ಞಾನೇಂದ್ರಿಯಗಳ ಮುಖಾಂತರ ಆಗಮಿಸುವದರಿಂದ ಆಗಮ ಎಂದು ಇನ್ನೊಂದು ವ್ಯಾಖ್ಯೆಯುಂಟು. "ಶಿವವಕ್ತ್ರೇಭ್ಯ ಆಗತ ಇತ್ಯಾಗಮಃ" ಲಿಂಗವೆಂದರೆ ಅವಬೋಧರೂಪವಾದ ವಿಮಲ ಜ್ಞಾನವು; ಈ ಜ್ಞಾನವು ಪಂಚ ಸ್ರೋತರೂಪದಿಂದ ಪಂಚೇಂದ್ರಿಯಗಳ ಮುಖಾಂತರ ಪಸರಿಸುವದರಿಂದ ಒಂದೊಂದು ಇಂದ್ರಿಯದಲ್ಲಿ ಒಂದೊಂದು ಲಿಂಗವಿದೆ ಎಂದು ವೀರಶೈವ ದರ್ಶನವು ಹೇಳುವದು. ಲಿಂಗದ ತೆರಹಿಲ್ಲದ ನಿರ್ನಿಮೇಷ ಧ್ಯಾನದಿಂದ ಎಂದರೆ ಅವಬೋಧರೂಪವಾದ ವಿಮಲ ಜ್ಞಾನ ಯೋಗದಿಂದ ಇಂದ್ರಿಯಂಗಳಿಗೆ ಆವರಿಸಿದ ತಮಸ್ಸು ಹರಿದು ತೇಜಸ್ಸು ಬೆಳಗಲನುವಾದರೆ ಆಗ ಅಂಗ ಕರಣಗಳು ಲಿಂಗಕರಣಗಳಾಗಿ ಮಾರ್ಪಡುವವು ಈ ಮಾರ್ಪಾಟು ಈ ಪಲ್ಲಟ, ಈ ಪರಿವರ್ತನೆಯೇ ಶಿವಯೋಗದ ರಹಸ್ಯವಾಗಿದೆ.

ಶಿವಾಗಮಗಳು "ಲಿಂಗಂ ಶೈವಮಿದಂ ಸಾಕ್ಷಾತ್ ಶಿವಶಕ್ತಿ ಉಭಯಾತ್ಮಕಂ" ಎಂದು ಲಿಂಗದ ವ್ಯಾಖ್ಯೆಯನ್ನು ಹೇಳುವವು. ಅವೇ ಆಗಮಗಳು ಶಿವನು ನಾದ ಸ್ವರೂಪನೆಂದೂ ಶಕ್ತಿಯು ಬಿಂದು ಸ್ವರೂಪವೆಂದೂ ವಿವರಿಸುವವು. ಬಿಂದು ಎಂದರೆ ಚಿತ್‌ಕಲೆಯೆಂದೂ ಕೇಂದ್ರಸ್ಥಾನವೆಂದೂ ಅರ್ಥ ವಿವರಣೆಯುಂಟು. ಗಣಿತ ಶಾಸ್ತ್ರದಲ್ಲಿ ವರ್ತುಲದ ಇಲ್ಲವೆ ತ್ರಿಕೋನದ ಮಧ್ಯಕ್ಕೆ ಬಿಂದು ಎಂದು ಹೆಸರಿರುವಂತೆ ಭೌತಿಕ ಶರೀರದ ಕೇಂದ್ರಸ್ಥಾನಕ್ಕೆ ಬಿಂದು ಎಂದು ಹೆಸರಿರುವದು. ಪೀನಿಯಲ್ ಗ್ಲ್ಯಾಂಡವೆ ಈ ಬಿಂದುವಾಗಿದೆ. ಪೀನಿಯಲ್ ಗ್ಲ್ಯಾಂಡವೆಂದರೆ ಪೀಯೂಷಗ್ರಂಥಿ. ಈ ಪೀಯೂಷ ಗ್ರಂಥಿಯು ಚಿತ್‌ಕಲೆಯೆಂದು ಕರೆಯಲ್ಪಡುವ ಪ್ರಜ್ಞಾನದ ಸ್ಥಾನವಾಗಿದೆ. ಈ ಚಿತ್‌ಕಲೆಯನ್ನು ಪ್ರತಿನಿಧಿಸುವ ಅರುಹಿನ ಪ್ರಭೆಗೆ ಪರಶಿವ ಇಲ್ಲವೆ ಪರವಸ್ತು ಎಂದು ಹೆಸರು. ಕಣ್ಣು ಒಂದು ರೂಪವನ್ನು ಕಂಡಾಗ ಇಲ್ಲವೆ ಕಿವಿಯು ಒಂದು ಶಬ್ದವನ್ನು ಕೇಳಿದಾಗ ಹಾಗೆಯೇ ಇನ್ನುಳಿದ ಇಂದ್ರಿಯಗಳು ತಮ್ಮ ತಮ್ಮ ವಿಷಯಗಳನ್ನು ಗ್ರಹಿಸಿದಾಗ ಮಿದುಳಿನ ಮಧ್ಯಭಾಗದಲ್ಲಿರುವ ಈ ಬಿಂದುವಿನಿಂದ ಶಕ್ತಿಯು ಹೊರಚಿಮ್ಮುತ್ತದೆ. ಮತ್ತು ಅದು ಮನದ ಸಾಮರ್ಥ್ಯದಿಂದ ವಿವಿಧ ವಸ್ತುಗಳ ರೂಪವನ್ನು ಗ್ರಹಿಸುತ್ತದೆ. ಈ ಬಿಂದುವಿನಿಂದ ಶಕ್ತಿಯು ಹೊರಚಿಮ್ಮದಿದ್ದರೆ ಮನಸ್ಸಿಗೆ ಯಾವ ವಸ್ತುವನ್ನು ಗ್ರಹಿಸಲು ಸಾಧ್ಯವಿಲ್ಲ. ಇಂದ್ರಿಯಗಳ ಮುಖಾಂತರವಾಗಿ ವಿಷಯ ಗ್ರಹಣವಾಗುತ್ತಿರುವವರೆಗೆ ಮನಸ್ಸಿಗೆ ಚಾಂಚಲ್ಯವು ತಪ್ಪಿದ್ದಲ್ಲ. ಮನಸ್ಸಿನ ಚಾಂಚಲ್ಯವು ಅಡಗಿ ಅರುಹಿನ ಶಾಂತಿಯ ಸಾಕ್ಷಾತ್ಕಾರವಾಯಿತೆಂದರೆ ಸಾಧಕನು ಪರವಸ್ತುವಿ

ನಲ್ಲಿ ನಿಲುಕದೆಯನ್ನು ಹೊಂದುವನೆಂದು ಯೋಗಶಾಸ್ತ್ರವು ಹೇಳುವದು. ಇಂದ್ರಿಯಗಳು ವಿಷಯಗಳ ಸನ್ನಿಕರ್ಷದಲ್ಲಿ ಬಂದಾಗಲೇ ಮನದಲ್ಲಿ ತಿಳಿವಳಿಕೆ ಮೂಡುತ್ತದೆ. ಎಂದರೆ ಸ್ಪರ್ಶಜ್ಞಾನವಿಲ್ಲದೆ ಮನಸ್ಸಿಗೆ ಯಾವ ಸಂವೇದನೆ ತಿಳಿವಳಿಕೆಗಳು ಉಂಟಾಗುವುದಿಲ್ಲ. ಏಕೆಂದರೆ ಜ್ಞಾನೇಂದ್ರಿಯ ಹಾಗು ಕರ್ಮೇಂದ್ರಿಯಗಳ ನರಗಳಿಗೆ ಚಾಲನೆಯುಂಟಾಗಬೇಕಾದರೆ ಸ್ಪರ್ಶವು ಅವಶ್ಯವಾಗಿ ಬೇಕು. ಆದರೆ ಇಂದ್ರಿಯ ವ್ಯಾಪಾರವೆಲ್ಲ ಸ್ತಬ್ಧವಾದ ಮನಸ್ಸು ಶಾಂತವಾಗಿ ಅದರಲ್ಲಿ ಯಾವ ತರಹದ ಹರಿದಾಟವು ಕಾಣಿಸಿಕೊಳ್ಳದಿದ್ದಾಗ ಇಂದ್ರಿಯ ಮತ್ತು ವಿಷಯಗಳೊಡನೆ ಸಂಪರ್ಕವಿಲ್ಲದಿರುವ ಅವಸ್ಥೆಯೊಂದು ಒದಗುತ್ತದೆ. ಇದೆಲ್ಲದರ ಮತಿತಾರ್ಥವೇನೆಂದರೆ ಇಂದ್ರಿಯಜನ್ಯ ಜ್ಞಾನವೆಲ್ಲವು ಕುರುಹಿನ ಸೋಂಕಿನಿಂದಲೇ ಕುದುರುವದಾದರೂ ಕುರುಹಿನ ಸೋಂಕಿಲ್ಲದೆ ಅಚ್ಚ ಅರುವಾಗುವ ಅವಸ್ಥೆಯು ಉಂಟೆಂದು ಹೇಳಿದ ಹಾಗಾಯಿತು. ದೇಹಸ್ಥ ಪುರುಷನು ಪೀಯೂಷ ಗ್ರಂಥಿಯಲ್ಲಿ ನೆಲೆನಿಂತಾಗಲೇ ಈ ಅರುಹಿನ ಅವಸ್ಥೆಯು ಅಳವಡುವದೆಂದು ಯೋಗಶಾಸ್ತ್ರವು ಸಾರುವದು.

ಶಿವಯೋಗದ ಇಡಿಯ ಸಾಧನೆಯು ಈ ಪೀಯೂಷ ಗ್ರಂಥಿಯಲ್ಲಿ ಸುಪ್ತವಾದ ಸಾಮರ್ಥ್ಯವನ್ನು ಜಾಗ್ರತಗೊಳಿಸುವದರ ಕಡೆಗೆ ಗಮನವೀಯುತ್ತದೆ. ಅನೇಕರಲ್ಲಿ ಈ ಗ್ರಂಥಿಯು ವಿಕಾಸವಾಗದ ಒಂದು ಅಪ್ರಬುದ್ಧ ಸ್ಥಿತಿಯಲ್ಲಿಯೇ ಇರುತ್ತದೆ. ಆದರೆ ಸಾವಕಾಶವಾಗಿಯಾದರೂ ಇದು ಪ್ರಗತಿಯನ್ನು ಹೊಂದುತ್ತಲಿರುವದೆಂಬ ಸಂಗತಿ ಸಮಾಧಾನಕಾರವಾಗಿದೆ. ಈ ಪ್ರಗತಿಯನ್ನು ತ್ವರಿತಗೊಳಿಸಿ ಅದನ್ನು ಒಂದು ಉಚ್ಚ ಮಟ್ಟಕ್ಕೆ ತಂದು ನಿಲ್ಲಿಸುವದು ಸಾಧ್ಯವಿದೆ. ಆ ಮಟ್ಟದಲ್ಲಿ ವಸ್ತುಗ್ರಹಣವು ಕುರುಹಿನ ಸೋಂಕಿನಿಂದಾಗದೆ ನೇರವಾಗಿ ಅರುಹಿನ ಸಂಪರ್ಕದಿಂದಾಗುವದು. ಅದರಿಂದಾಗಿ ಯೋಗಿಗೆ ಪದಾರ್ಥಗಳ ಜ್ಞಾನವು ಬಿಡಿ ಬಿಡಿಯಾಗಿ ಆಗದೆ ಇಡಿಯಾಗಿ ಆತ್ಮಸಾತ್ ಆಗುವದು ಕಣ್ಣು ನೋಡುವುದಕ್ಕೆ ಇಂದ್ರಿಯವಾಗಿರುವಂತೆ ಕಿವಿಯು ಕೇಳುವದಕ್ಕೆ ಕರಣವಾಗಿರುವಂತೆ ಈ ಪೀಯೂಷ ಗ್ರಂಥಿಯು ಅಖಂಡ ಜ್ಞಾನಾರ್ಜನೆಗೆ ಸಾಧನವಾಗಿರುತ್ತದೆ. ಈ ಗ್ರಂಥಿಯನ್ನು ಸಂಪೂರ್ಣವಾಗಿ ವಿಕಾಸಗೊಳಿಸಿಕೊಂಡ ಯೋಗಿಯು ಗಣಿತ ಶಾಸ್ತ್ರಕ್ಕೆ ನಿಲುಕುವ ಕಾಲವನ್ನು ಮೀರುವನು. ಆಗ ಅವನಿಗೆ ಹಿಂದು ಇಂದು ಮುಂದು ಎಂಬ ದಂದುಗವೆ ಉಳಿಯುವದಿಲ್ಲ ಪರಿಶುದ್ಧವಾಗಿ ಅರಳಿದ ಅವನ ಅರುಹಿನ ದೃಷ್ಟಿಗೆ ಯಾವಾಗಲೂ ನಿತ್ಯ ನವೀನವಾದ ವರ್ತಮಾನವೇ ತೋರುವದು. ಅದರ ಮಾನವಲ್ಲಿ ಹಿಂದು ಮುಂದುಗಳ ಆಕಲನೆಯು ಸಹಜವಾಗಿ ಸಮನಿಸುವದು. ಪೀಯೂಷ ಗ್ರಂಥಿಯು ಜಾಗ್ರತವಾದಲ್ಲಿ ಯೋಗಿಗೆ ಇಂಥಹದೊಂದು ಅದ್ಭುತವಾದ ಸಾಮರ್ಥ್ಯವು ಕೈಸೇರುವದು. ಅದಕ್ಕಾಗಿ ಯೋಗಶಾಸ್ತ್ರದಲ್ಲಿ ಈ ಪೀಯೂಷ ಗ್ರಂಥಿಗೆ ತೃತೀಯ ನೇತ್ರವೆಂದು ಸಂಬೋಧಿಸುವದುಂಟು ಈ ಮೂರನೆಯ ಕಣ್ಣಿನ ಕಾರ್ಯಕಲಾಪಗಳು ಹಣೆಯ ನಡುವಿನ ಸ್ಥಾನದಿಂದ ಭ್ರೂಮಧ್ಯ ಮಾರ್ಗವಾಗಿ ಸಾಗುತ್ತಿರುವವು; ಈ



ಕಣ್ಣನ್ನು ಗುರುತಿಸುವದಕ್ಕಾಗಿ ಹಿಂದುಗಳು ಹಣೆಯ ಮೇಲೆ ಒಂದು ತಿಲಕವನ್ನು ಇಟ್ಟುಕೊಳ್ಳುವದುಂಟು. ಶಿವನನ್ನು ಚಿತ್ರರೂಪವಾಗಿ ಬರೆದು ತೋರಿಸುವಾಗ ಹಣೆಯಲ್ಲಿ ಒಂದು ಕಣ್ಣನ್ನು ಮೂಡಿಸಿ ಅದರಿಂದ ಕೆಂಪು ಜ್ವಾಲೆಗಳು ಹೊರಬೀಳುತ್ತಿರುವುದನ್ನು ಕಾಣಿಸುವರು ಇದರ ರಹಸ್ಯವೇನು? ಇದು ತೃತೀಯ ನೇತ್ರವಾದ ಪೀಯೂಷ ಗ್ರಂಥಿಯ ಸೂಚಕವಲ್ಲವೆ? ಶಿವನು ಒಬ್ಬ ಮಹಾಯೋಗಿಯೆಂದು ಹೇಳುತ್ತಿರುವದಲ್ಲವೆ? ಐದುಸಾವಿರ ವರುಷಗಳಿಗಿಂತ ಪೂರ್ವದ ಸಂಸ್ಕೃತಿಯನ್ನು ವ್ಯಕ್ತಗೊಳಿಸುವ ಮೋಹೆಂಜೊದಾರೊ-ಹರಪ್ಪಾದ ಅಗೆತಗಳಲ್ಲಿ ಸಿಕ್ಕಿರುವ ಅವಶೇಷಗಳಲ್ಲಿ ಶಿವನನ್ನು ಅನಿಮಿಷ ದೃಷ್ಟಿಯ ಒಬ್ಬ ಮಹಾಯೋಗಿಯೆಂದು ರೂಪಿಸಲಾಗಿದೆ. ಮೋಹೆಂಜೊದಾರೊ-ಹರಪ್ಪಾದ ಚಿತ್ರಲಿಪಿಗಳಲ್ಲಿ ದೊರೆತ ಮೀನಕಣ್, ಮುಂಕಣ್, ಬಿಡುಗಣ್ ಈ ಮುಂತಾದ ಪದಗಳು ಆ ಶಿವಯೋಗದ ನೆಲೆಕಲೆಗಳನ್ನು ನಿರ್ಧರಿಸಲು ಸಹಾಯ ಮಾಡುತ್ತವೆ. ಮನುಷ್ಯನ ಪ್ರವೃತ್ತಿಗಳು ಕೀಳುದೆಶೆಗೆ ಇಳಿಯುತ್ತ ಹೋದಂತೆ ಅವನು ವಿಷಯ ಸುಖಗಳಲ್ಲಿಯೇ ಮಗ್ನನಾಗುವನು; ಅದರಿಂದಾಗಿ ಈ ಮೂರನೆಯ ಕಣ್ಣಿನ ವಿಕಾಸವು, ಈ ಪೀಯೂಷ ಗ್ರಂಥಿಯ ಪ್ರಗತಿಯು ಕುಂಠಿತವಾಯಿತು. ಅರುಹಿನ ದೃಷ್ಟಿ ಎನ್ನಿಸಿಕೊಳ್ವ ಈ ಕಣ್ಣು ಮತ್ತು ಕಾಮಾಂಗ ಇವು ತಕ್ಕಡಿಯ ಎರಡು ಪರಡಿಗಳಿದ್ದಂತೆ. ಒಂದು ಭಾರವಾದಾಗ ಇನ್ನೊಂದು ಹಗುರಾಗಿ ಮೇಲೆ ಏರುವದು. ಕಾಮವಾಸನೆ, ಲಾಲಸೆ ಇತ್ಯಾದಿಗಳನ್ನು ಮೀರಿನಿಂತಾಗ ಈ ಮೂರನೆಯ ಕಣ್ಣು ತೆರೆಯುವದು ಎಂದರೆ ಪೀಯೂಷ ಗ್ರಂಥಿಯು ಜಾಗ್ರತವಾಗಿ ಪ್ರಭಾಪುಂಜವಾಗಿ ಅರಳಿಕೊಳ್ಳುವದು.

ಈ ಪೀಯೂಷ ಗ್ರಂಥಿಯನ್ನು ಜಾಗ್ರತಗೊಳಿಸುವದಕ್ಕಾಗಿ ವೀರಶೈವ ಧರ್ಮವು ಸರಳವಾದ, ಸುಂದರವಾದ, ಸುಲಲಿತವಾದ ವಿಧಾನವೊಂದನ್ನು ಹೇಳಿಕೊಟ್ಟಿದೆ-ಅದೆ ಇಷ್ಟಲಿಂಗದ ಪೂಜಾಕ್ರಮವು ಇಷ್ಟಲಿಂಗದ ಕಂತೆಯು ಕಳಾಭರಿತವಾಗಿರಬೇಕು ಅಲ್ಲದೆ ಅದು ಸಶಾಸ್ತ್ರೀಯವಾಗಿ ಸಿದ್ಧಮಾಡಲ್ಪಟ್ಟಿರಬೇಕು. ಪೂಜೆಯ ನಂತರ ಅನುಸಂಧಾನದ ಕಾಲಕ್ಕೆ ಇಷ್ಟಲಿಂಗವನ್ನು ಅಂಗೈಯಲ್ಲಿಟ್ಟು ಮೈಯನ್ನು ಸಡಿಲಾಗಿರಿಸಿ ಅಂಗೈಯನ್ನು ಭ್ರೂಮಧ್ಯದಿಂದ ಸುಮಾರು ಹನ್ನೆರಡು ಅಂಗುಲ ಪ್ರಮಾಣದಲ್ಲಿರಿಸಿ ಲಿಂಗವನ್ನು ನೆಟ್ಟನೋಟದಿಂದ ಧ್ಯಾನಿಸಬೇಕು. ಇದಕ್ಕೆ ಶಾಂಭವಿ ಮುದ್ರೆಯೆಂದು ಹೆಸರು. ಯೋಗಶಾಸ್ತ್ರದಲ್ಲಿ ಮೂರು ಮುಖ್ಯವಾದ ಮುದ್ರೆಗಳಿವೆ. ಖೇಚರಿ, ಷಣ್ಮುಖಿ, ಶಾಂಭವಿ ಎಂದು. ಇವುಗಳಲ್ಲಿ ಶಾಂಭವಿ ಮುದ್ರೆಯು ಸುಲಭವಾಗಿರುವದರಿಂದ ಸಣ್ಣ ಮಕ್ಕಳು, ಹೆಣ್ಣುಮಕ್ಕಳು ಅದನ್ನು ಆಯಾಸವಿಲ್ಲದೆ ಸಾಧಿಸಬಹುದು. ಅನುಸಂಧಾನದ ಕಾಲಕ್ಕೆ ಇಷ್ಟಲಿಂಗದಲ್ಲಿರಿಸಿದ ತನ್ಮಯವಾದ ನೋಟವು ದೇಹದಲ್ಲಿ ತಪಸ್ಸನ್ನು ಎಂದರೆ ಒಂದು ಬಗೆಯ ಕಾವನ್ನು ಹುಟ್ಟಿಸುವದು. ಅದರಿಂದಾಗಿ ಸುಪ್ತಸ್ಥಿತಿಯಲ್ಲಿದ್ದ ಪೀಯೂಷ ಗ್ರಂಥಿಯಲ್ಲಿ ಒಂದಿಷ್ಟು ನಡುಕ ಹುಟ್ಟಿ ಅದು ಜಾಗ್ರತವಾಗುವದು. ಆಗ

ಸಾಧಕನಿಗೆ ಅಲ್ಲಿ ಏನೋ ಒಂದು ಹರಿದಾಡುತ್ತಿದೆ ಎಂಬ ತಿಳಿವಳಿಕೆಯು ಮೂಡುವದು. ಈ ನಡುಕವು ತಲೆದೋರಿದಾಗ ಪೀಯೂಷ ಗ್ರಂಥಿಯನ್ನು ಸುತ್ತುವರೆದ ಮಿದುಳಿನ ಪೊಳ್ಳು ಭಾಗದಲ್ಲಿ ವಿದ್ಯುತ್ ಸಂಚಾರವಾದಂತಾಗುತ್ತದೆ. ಇದರ ಪರಿಣಾಮವಾಗಿ ಈ ಗ್ರಂಥಿಯ ಸಾಂದ್ರವಾದ ಪರಮಾಣುಗಳಲ್ಲಿ ಗುಳುಗುಳು ಹರಿದಾಟ ಒಂದರ ಅರಿವಾಗುತ್ತದೆ. ಆ ಕಾಲಕ್ಕೆ ಧ್ಯಾನವು ವಿದ್ಯುತ್‌ಪ್ರವಾಹವನ್ನುಂಟು ಮಾಡುವಷ್ಟು ಪ್ರಬಲವಾಗಿದ್ದರೆ ತಪಸ್ಸು ಅಥವಾ ಕಾವು ಇನ್ನಷ್ಟು ತೀವ್ರವಾಗುವದು. ಅದರಿಂದಾಗಿ ಸೂಕ್ಷ್ಮ ಶರೀರದ ವಿವಿಧ ಶಕ್ತಿಯ ಕೇಂದ್ರಗಳಲ್ಲಿ ಅವಿತುಕೊಂಡಿದ್ದ ಕಾವಳವೆಲ್ಲ ಅಡಗಿ ತೇಜವು ಒಡಮೂಡುವದು. ಹೀಗೆ ತಪಸ್ಸು ತೇಜಸ್ಸಾಗಿ ಮಾರ್ಪಟ್ಟಿತೆಂದರೆ ಇಡಿಯ ದೇಹವೇ ವಿದ್ಯುತೀಕರಣವನ್ನು ಪಡೆಯುವದು. ಆಗ ಪೀಯೂಷ ಗ್ರಂಥಿಯಲ್ಲಿದ್ದ ವಿಮರ್ಶ ಶಕ್ತಿಯು ಹೆಚ್ಚು ಪರಿಸ್ಫುಟವಾಗಿ ಜಾಗ್ರತಗೊಂಡು ಸಂತತಧಾರೆಯಾಗಿ ಹರಿಯತೊಡಗುವದು. ತತ್‌ಪರಿಣಾಮವಾಗಿ ವಿಚಾರ ಸಾಮರ್ಥ್ಯವು ಅತ್ಯುಚ್ಛ್ರಾಯ ಸ್ಥಿತಿಯನ್ನು ಪಡೆಯುವದು. ಕೊನೆಗೆ ತಪಸ್ಸು ತೇಜಸ್ಸುಗಳು ಅವಿರಳವಾಗಿ ಅನ್ಯೋನ್ಯವಾಗಿ ಬೆರೆತು ಓಜಸ್ಸಾಗಿ ಹೊರಹೊಮ್ಮುವದು. ಈ ಓಜಸ್ಸು ಏಕಕಾಲಕ್ಕೆ ಆತ್ಮನ ಕರ್ತೃತ್ವ ಶಕ್ತಿಯಾಗಿ ಕಲ್ಪಕವೃತ್ತಿಯಾಗಿ ತಳತಳಿಸುವದು. ಎಲ್ಲಿ, ಯಾವ ಅರುಹಿನ ಅವಸ್ಥೆಯಲ್ಲಿ ಸಂಕಲ್ಪವೇ ಸೃಷ್ಟಿಯಾಗಿ ಪರಿಣಮಿಸುವದೊ, ಎಲ್ಲಿ ಹರಿತವಾದ ಕ್ರಿಯೆ ಮತ್ತು ಸ್ಫುರಿತವಾದ ಜ್ಞಾನ ಇವು ಗಾಢವಾಗಿ ವ್ಯಾಪಕವಾಗಿ ಅಳವಟ್ಟು ಅವಿರಳವಾದ ಆನಂದವು ಚಿಮ್ಮುತ್ತಿರುವದೊ ಅಲ್ಲಿ, ಆ ಪ್ರಜ್ಞೆಯ ಪೂರ್ಣಾವಸ್ಥೆಯಲ್ಲಿ ಶಿವಯೋಗವು ಸಾಧಕನನ್ನು ಒಯ್ದು ನಿಲ್ಲಿಸುವದು. ಪೀಯೂಷ ಗ್ರಂಥಿಯನ್ನೆ ಜಾಗ್ರೆತಗೊಳಿಸುವುದಕ್ಕಾಗಿ ಮೀಸಲಾದ ಶಿವಯೋಗದಲ್ಲಿ ಇಂತಹದೊಂದು ಗಹನವಾದ ಗಂಭೀರವಾದ ಆದರೂ ಸುಂದರವಾದ, ಸುಮನೋಹರವಾದ ಸಾಮರ್ಥ್ಯವಡಗಿದೆ ಇದುವೆ ಶಿವಯೋಗದ ಸಾರಸರ್ವಸ್ವ. ●

**ರಾಜಕೀಯದ ಘನತೆ**

ರಾಜಕೀಯದ ಘನತೆ ಸುಂದರ ಗುಲಾಬಿ
ಅರಳಿದರೆ ಹಾರುತ್ತ ಸುತ್ತುತಿವೆ ದುಂಬಿ
ಮುಳ್ಳು ಚುಚ್ಚಿರೆ ಸಹಿಸಿ ಮಧುವನ್ನು ಹೀರು
ಹುಟ್ಟು ಹೆರವರ ಪಾಲು ನಿಮಗೆ ಗಡಿಪಾರು

—ಕೆ. ವಿರೂಪಾಕ್ಷ ಗೌಡ.



# ಶ್ರೀ 'ದೊಲನ'

—ಹೆಚ್. ದೇವಿರಪ್ಪ

ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಪಂಡಿತರಾಗಿ ಕೆಲಸಕ್ಕೆ ಸೇರಿ ಪ್ರಾಧ್ಯಾಪಕ ಪದವಿಗೇರಿ ಸಹಸ್ರ ಸಹಸ್ರ ವಿದ್ಯಾರ್ಥಿಗಳಿಗೆ ಕನ್ನಡ ಸಾಹಿತ್ಯದ ಸೌಂದರ್ಯಸೊಬಗುಗಳನ್ನು ಪರಿಚಯ ಮಾಡಿಕೊಟ್ಟರು. ಡಿ.ಡಿ.ಎಲ್. ನರಸಿಂಹಾಚಾರ್ಯರು. ಅನೇಕ ಕನ್ನಡ ಕಾವ್ಯಗಳನ್ನು ಬೆಳಕಿಗೆ ತಂದು ಹಲವು ಸಂಶೋಧನಾತ್ಮಕ ಲೇಖನಗಳನ್ನು ಬರೆದು ಕನ್ನಡ ಸಾಹಿತ್ಯದ ಶ್ರೀಮಂತಿಕೆಯನ್ನು ಹೆಚ್ಚಿಸಿದವರು ಆದುದರಿಂದ ಶ್ರೀ ಆಚಾರ್ಯರು ಚಿರಸ್ಮರಣೀಯರಾಗಿರುವರು.

ಧಾರವಾಡದ ಕನ್ನಡ ಪ್ರಾಧ್ಯಾಪಕರೊಬ್ಬರು ಹೇಳಿದ್ದಾರೆ: ಶ್ರೀ ಡಿ.ಎಲ್. ನರಸಿಂಹಾಚಾರ್ಯರು ಧಾರವಾಡದ ಪ್ರದೇಶದವರಾಗಿದ್ದರೆ ನಾವು ಅವರನ್ನು ಪ್ರೊಫೆಸರ್ ದೊಡ್ಡ ಬೆಲೆ ಎಂದು ಕರೆಯುತ್ತಿದ್ದೆವು ಎಂದು. ದೊಡ್ಡ ಬೆಲೆ ಲಕ್ಷ್ಮೀನರಸಿಂಹಾಚಾರ್ಯ ಎಂಬುದು ಅವರ ಪೂರ್ಣ ಹೆಸರು. ಅವರ ಪೂರ್ವಿಕರ ಊರು ದೊಡ್ಡಬೆಲೆ. ಆ ಊರನ್ನು ನರಸಿಂಹಾಚಾರ್ಯರು ನೋಡಿಯೇ ಇರಲಿಲ್ಲ. ಅವರ ತಂದೆ ಶಾಮಯ್ಯಂಗಾರ್ಯರು ಬಹು ಹಿಂದೆಯೇ ಆ ಊರನ್ನು ಬಿಟ್ಟು ಸಬ್‌ರಿಜಿಸ್ಟ್ರಾರ್ ಕಛೇರಿಯ ಗುಮಾಸ್ತರಾಗಿ ಊರೂರು ಅಲೆಯುತ್ತಿದ್ದವರು. ಆದರೂ ದೊಡ್ಡಬೆಲೆ ಎಂಬ ಅಂಕಿತನಾಮ ಶ್ರೀ ನರಸಿಂಹಾಚಾರ್ಯರ ಪಾಲಿಗೆ ಅನ್ವರ್ಥನಾಮವಾಯಿತು. ಶ್ರೀ ಆಚಾರ್ಯರು ನಿಜಕ್ಕೂ "ದೊಡ್ಡ ಬೆಲೆ" ಈ ದೊಡ್ಡ ಬೆಲೆಯು ರೂಪುಗೊಳ್ಳುವುದಕ್ಕೆ ಇವರ ಪೂರ್ವಿಕರಲ್ಲಿದ್ದ ಗುಣವಿಶೇಷಗಳೂ ಬಹುಮಟ್ಟಿಗೆ ಕಾರಣ. ಇವರ ತಂದೆಯ ತಂದೆ; ದೊಡ್ಡಬೆಲೆ ಕೃಷ್ಣಮಾಚಾರ್ ಅವರು ಕೂಲಿಮಠದ ಓಜರಾಗಿ ಒಳ್ಳೆಯ ಅಧ್ಯಾಪಕರೆಂದು ಹೆಸರು ಪಡೆದಿದ್ದರಂತೆ. ಇವರ ತಾಯಿಯ ತಂದೆ ಅಣ್ಣಾಸ್ವಾಮಿ ಅಯ್ಯಂಗಾರ್ಯರು ಭಾರತವಾಚನ ಮಾಡುವುದರಲ್ಲಿ ಸುಪ್ರಸಿದ್ಧರಾಗಿದ್ದರು. ಹನ್ನೆರಡನೆಯ ವಯಸ್ಸಿನಲ್ಲಿಯೆ ಕನ್ನಡ ಜೈಮಿನಿ ಭಾರತವನ್ನು ಓದಿ ಅರ್ಥಮಾಡಿಕೊಂಡು ಅದರ ಬಹುಭಾಗವನ್ನು ಕಂಠಪಾಠ ಮಾಡಿಕೊಂಡುದು ಶ್ರೀ ಆಚಾರ್ಯರು ಹಿರಿಯರಿಂದ ಪಡೆದ ಸಂಸ್ಕಾರವಲ್ಲದೆ ಮತ್ತೇನು? ತುಮಕೂರು ಹೈಸ್ಕೂಲಿನ ನಾಲ್ಕನೆಯ ಫಾರಂನಲ್ಲಿ ಅಂದರೆ ಈಗಿನ ಹೈಸ್ಕೂಲ್ ಎಂಟನೆಯ ತರಗತಿ–ಓದುತ್ತಿದ್ದಾಗಲೇ ನಾಗವರ್ಮನ ಛಂದೋಂಬುಧಿಯನ್ನೂ "ಪದ್ಯಸಾರ" ಎಂಬ ಹಳಗನ್ನಡ ಪದ್ಯ ಸಂಕಲನದ ಎರಡು ಭಾಗಗಳನ್ನೂ ಓದಿಕೊಂಡಿದ್ದರೆಂದು ಗೊತ್ತಾಗುತ್ತದೆ. ವಿಜ್ಞಾನ ವಿಭಾಗದಲ್ಲಿಯೂ

ಶ್ರೀ ಆಚಾರ್ಯರು ತುಂಬ ಆಸಕ್ತಿ ಉಳ್ಳವರಾಗಿದ್ದರು. ಅವರು ಕನ್ನಡ ಸಾಹಿತ್ಯವನ್ನು ವ್ಯಾಸಂಗ ಮಾಡಲು ಮನಸ್ಸು ಮಾಡಿದ್ದು ಕನ್ನಡ ಜನತೆಯ ಪುಣ್ಯವೆಂದೇ ಹೇಳಬೇಕು. ಕನ್ನಡ ಎಂ.ಎ. ಪರೀಕ್ಷೆಯಲ್ಲಿ ಪ್ರಥಮಸ್ಥಾನಗಳಿಸಿ ಪ್ರಥಮ ವೈಸ್ ಚಾನ್ಸಲರ್ ಎಚ್. ವಿ. ನಂಜುಂಡಯ್ಯನವರ ಪದಕವನ್ನು ಪಡೆದರು.

ಅನಂತರ ಮೊದಲು ಕೆಲಸಕ್ಕೆ ಸೇರಿದ್ದು ಮೈಸೂರು ಓರಿಯಂಟಲ್ ಲೈಬ್ರರಿ (ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್) ಯಲ್ಲಿ ಕನ್ನಡ ಪಂಡಿತರಾಗಿ ಸೇರಿಕೊಂಡರು. ಆ ಮೊದಲೇ ಕನ್ನಡ ಸಂಶೋಧನ ವಿದ್ಯಾರ್ಥಿಯಾಗಿ ಉತ್ತಮ ಲೇಖನಗಳನ್ನು ಬರೆದು ಪ್ರಕಟಿಸಿದ ಶ್ರೀ ಆಚಾರ್ಯರು ಓರಿಯಂಟಲ್ ಲೈಬ್ರರಿಯಿಂದ ಪಡೆದ ಪ್ರಯೋಜನ ಅಷ್ಟಿಷ್ಟಲ್ಲ. ಓರಿಯಂಟಲ್ ಲೈಬ್ರರಿಯ ಪಕ್ಕದಲ್ಲಿಯೇ ಇದ್ದ ಶಾಸನದ ಇಲಾಖೆಯೂ ಅವರ ಹಸಿವನ್ನು ಇಂಗಿಸುತ್ತಿದ್ದುದುಂಟು. ಪುಸ್ತಕ ಭಂಡಾರದಲ್ಲಿ ಸಂಗ್ರಹಿಸಿ ಸುರಕ್ಷಿತವಾಗಿಟ್ಟದ್ದ ಕನ್ನಡ ಹಸ್ತಪ್ರತಿಗಳೆಲ್ಲವನ್ನೂ ಇವರು ಆದ್ಯಂತವಾಗಿ ವ್ಯಾಸಂಗ ಮಾಡಿರುವುದು ಅತ್ಯಾಶ್ಚರ್ಯಕರವಾದ ಸಂಗತಿ. ಯಾರಾದರೂ ಉತ್ಸಾಹೀ ವಿದ್ವಾಂಸರು ಆ ಲೈಬ್ರರಿಯ ಹಸ್ತಪ್ರತಿಗಳನ್ನು ಒಂದೊಂದಾಗಿ ತೆಗೆದುಕೊಂಡು ಕುಲಂಕಷವಾಗಿ ಪರೀಕ್ಷೆ ಮಾಡುತ್ತ ತಾನೇ ಆ ಹಸ್ತಪ್ರತಿಯನ್ನು ಮೊದಲ ಬಾರಿಗೆ ಅವಲೋಕಿಸುತ್ತಿದ್ದೇನೆಂದು ಬಿಂಕದಿಂದ ಬೀಗುತ್ತ ಮುಂದುವರದರೆ ಅಂಥ ವಿದ್ವಾಂಸನು ಹಸ್ತಪ್ರತಿಯನ್ನು ಮುಟ್ಟಿದ ಕೆಲವೇಗಳಿಗೆಗಳಲ್ಲಿ ತನ್ನ ಸ್ವಯಂ ಪ್ರತಿಷ್ಠೆಯ ಗುರಿಗಳನ್ನು ಮುದುಡಿಕೊಳ್ಳಬೇಕಾಗುವುದು. ಏಕೆಂದರೆ ಆ ತರುಣ ವಿದ್ವಾಂಸನದು ತಪ್ಪುಗ್ರಹಿಕೆಯಾಗಿರುತ್ತದೆ. ಯಾರೂ ನೋಡಿಲ್ಲವೆಂದು ತಾನು ತಿಳಿದುಕೊಂಡಿರುವ ಹಸ್ತಪ್ರತಿಯಲ್ಲಿ, ಕೆಲವು ಪಂಕ್ತಿಗಳ ಕೆಳಗೆ ಈಗಿನ ಕಾಲದ ಮಸಿಯಲ್ಲಿ ಕೆಳಗೆರೆ ಎಳೆದಿರುವುದೋ ಅಂಚಿನಲ್ಲಿ ಅಲ್ಲೊಂದು ಮಾತು ಇಲ್ಲೊಂದು ಮಾತು ಬರೆದಿರುವುದೋ ಆತನ ಕಣ್ಣಿಗೆ ಬೀಳುವುದು. ಇದನ್ನು ನೋಡಿ ಚಕಿತಗೊಂಡ ತರುಣ ಈ ಗವಿಗೂ ಒಂದು ಹೆಜ್ಜೆ ಮೂಡಿಸಿದೆಯಲ್ಲಪ್ಪಾ ಈ 'ಸಿಂಹ' ಎನ್ನುತ್ತಾನೆ. ಆ ಸಿಂಹ ಇನ್ನಾರು? ಅವರೇ ಶ್ರೀ ನರಸಿಂಹ ಆಚಾರ್ಯ. ದೊಡ್ಡಬೆಲೆ ಲಕ್ಷ್ಮೀನರಸಿಂಹ ಆಚಾರ್ಯರು.

ಹಸ್ತಪ್ರತಿಗಳ ವಿದ್ಯಾರಣ್ಯದ ಮೂಲೆ ಮೂಡುಕಿಗಳಲ್ಲಿ ಸರುವುದರಿವುಗಳಲ್ಲಿ ಸಂಚಾರ ಮಾಡಿರುವ ವಿದ್ವಾಂಸರಿದ್ದಾರು. ಅಲ್ಲೆಲ್ಲಾ ಈ ಆಚಾರ್ಯರೂ ಹೋಗಿ ಬಂದಿದ್ದಾರೆ. ಆದರೆ ಒಂದು ವ್ಯತ್ಯಾಸ; ಇವರ ಕಣ್ಣಿಗೆ ಬಿದ್ದಿರುವ ಬಗೆ ಬಗೆಯ ಮರಬಳ್ಳಿ ಪೊದರುಗಳು ಮೃಗ ಪಕ್ಷಿ ಕ್ರಿಮಿಕೀಟಗಳು ಬೇರೆಯವರ ದೃಷ್ಟಿಗೆ ಬಿದ್ದಿರಲಿಕ್ಕಿಲ್ಲ. ಇವರು ತುಳಿದಿರುವಷ್ಟು ತಿಳಿದಿರುವಷ್ಟು ಹಾದಿಯನ್ನು ಬೇರೆಯವರಾರೂ ಇವರಷ್ಟು ಚೆನ್ನಾಗಿ ಅರಿತಿರಲಾರರು. ಇವರು ಕಂಡಂತ ದಿವ್ಯ ದರ್ಶನಗಳನ್ನು ಬೇರೆಯವರು ಅದೇ ಮಟ್ಟದಿಂದ ಕಂಡಿರಲಾರರು ಹಸ್ತ ಪ್ರತಿಗಳ ಪ್ರಪಂಚಕ್ಕೆ ಇವರಷ್ಟು ಪರಿಚಿತರು ಹಿಂದೆ



ಆಗಿಲ್ಲ, ಈಗ ಇಲ್ಲ. ಕನ್ನಡ ಶಾಸನಗಳಿಗೂ ಇದೇ ಮಾತು ಅನ್ವಯಿಸುವುದು. ಇವರು ಓದಿ ಗುರುತು ಹಾಕಿಕೊಳ್ಳದ ಕನ್ನಡ ಶಾಸನವಿಲ್ಲ ಎಂದರೆ ಅತಿಶಯೋಕ್ತಿಯಲ್ಲ.

ಈ ಓದೆಲ್ಲ ಏಕೆ? ಎಂದು ಪ್ರಶ್ನಿಸುವವರೂ ಉಂಟು. ಕನ್ನಡ ಪ್ರಾಚೀನಕಾವ್ಯಗಳ ಸಮಗ್ರ ಪರಿಚಯವನ್ನು, ಅವುಗಳ ಜೀವಾಳವನ್ನು ಅರಿಯುವುದಕ್ಕೆ ಇಷ್ಟೆಲ್ಲಾ ಸಿದ್ಧತೆ ಆಗಲೇಬೇಕು. ಕನ್ನಡ ಸಂಸ್ಕೃತಿಯ ಇತಿಹಾಸ ಅಪೂರ್ವ. ಕನ್ನಡ ಮಾತುಗಳ ಸರಿಯಾದ ಅರ್ಥ ಇವೆಲ್ಲ ತಿಳಿಯಬೇಕಾದರೆ ಸಿದ್ಧಪಡಿಸಿದ ಗ್ರಂಥಗಳಷ್ಟೇ ಸಾಲವು. ಶ್ರೀ ಆಚಾರ್ಯರು ತಾವು ಒಂದು ಸಲ ಓದಿದರೆ ಸಾಕು. ನೆನಪಿಟ್ಟುಕೊಳ್ಳಬೇಕಾದ ಅಂಶಗಳನ್ನು ತಮ್ಮ ನೆನಪಿನ ಚೀಲದಲ್ಲಿ ತುಂಬಿಕೊಳ್ಳುತ್ತಿದ್ದರು. ಅಗತ್ಯವಿದ್ದಾಗ ಆ ಅಂಶಗಳೆಲ್ಲಾ ಮೇಲೆ ಬಂದು ತಮ್ಮ ಕಾರ್ಯವನ್ನು ನಿರ್ವಹಿಸಿ ಮರೆಯಾಗುತ್ತಿದ್ದವು. ಶ್ರೀ ಡಿ. ಎಲ್. ಎನ್. ಅವರ ಅತ್ಯದ್ಭುತ ಜ್ಞಾಪಕಶಕ್ತಿ ಅವರ ಪಾಂಡಿತ್ಯಕ್ಕೆ ಸಹಜತೆ ಸತ್ವ ಸೌಂದರ್ಯಗಳನ್ನೀಯುತ್ತಿದ್ದಿತು.

ಶ್ರೀ ಆಚಾರ್ಯರನ್ನು ಹೊರನೋಟಕ್ಕೆ ಮೊದ್ದು ಮೊದ್ದು ಪ್ರೊ. ಮಾಳವಾಡರು, "ದೇಹ ಸ್ಥೂಲ; ವೇಷ ಕಣ್ಣಿಗೆ ಕಟ್ಟುವಂತಹುದಲ್ಲ; ನಗಲು ಸಾಧ್ಯವಿಲ್ಲವೆಂಬಂದತಿರುವ ಗಾಂಭೀರ್ಯ; ಬಗೆಹೊದ್ದು ಇವು ನನಗೆ ಮೊದಲು ಕಂಡುಬಂದ ಲಕ್ಷಣಗಳು" ಎಂದಿರುವರು. ಈ ಮಾತು ಬಹು ಮಟ್ಟಿಗೆ ನಿಜ. ವಯಸ್ಸಿನ ದೆಸೆಯಿಂದಲ್ಲದೆ, ಪಾಂಡಿತ್ಯದ ಭಾರದಿಂದ ನಸುಬಾಗಿರುವ, ಕೊಂಚ ಸ್ಥೂಲ ಕಾಯದು ಕಣ್ಣಿಗೆ ಗೆಂಪಿನ ಕಟ್ಟಾಗಿ ಶುಭ್ರವಾದ ತೆಳ್ಳನೆಯ ಪಂಚೆ, ಕೊರಳು ಮುಚ್ಚುವ ಕೋಟು, ತಲೆಗೊಂದು ಟೋಪಿ ಇಲ್ಲವೆ ಜರಿಯಂಚಿನ ಪೇಟ; ಬಲಗೈಯಲ್ಲಿ ಛತ್ರಿ ಎಡಗಯ್ಯಲ್ಲಿ ನಾಲ್ಕಾರು ದಪ್ಪನೆಯ ಪುಸ್ತಕಗಳು. ಇಷ್ಟು ಭಾರವನ್ನೂ ತಡೆದುಕೊಳ್ಳಬಲ್ಲ ಮೃದು ಜೋತಾದ ಎಕ್ಕಡಗಳು ಇವರೇ ನಮ್ಮ ಧೊಲನ, ಎಂದರೆ ಡಿ. ಎಲ್. ಎನ್.

ಪಾಠ ಹೇಳುವುದಕ್ಕೆ ವಿದ್ಯಾರ್ಥಿಗಳ ಕೊಠಡಿಗೆ ಬರುವಾಗಲೆಲ್ಲ ಇವರು ತುಂಬಿದ ಬಂಡಿಯೆ. ಸಾಕಷ್ಟು ಪೂರ್ವ ಸಿದ್ಧತೆಯನ್ನು ಮಾಡಿಕೊಂಡೆ ಬರುತ್ತಿದ್ದರು. ಬಿ.ಎ. ಬಿ.ಎಸ್ಸಿ. ವಿದ್ಯಾರ್ಥಿಗಳಿಗೆ ಜೀವಂತ ಲೇಖಕರ ಕೃತಿಗಳನ್ನು ಪಾಠ ಮಾಡುವ ಸಂದರ್ಭವೂ ಇವರಿಗೆ ಒದಗುತ್ತಿದ್ದಿತು. ಪ್ರಕೃತ ಲೇಖಕರು ತಮ್ಮ ಆತ್ಮೀಯ ಗೆಳೆಯರೆಂದು ಅವರ ಬಗೆಗೆ ತಮಗೆ ತುಂಬ ಆದರ ಅಭಿಮಾನಗಳಿವೆಯೆಂದೂ ಹೇಳಿ ಅನಂತರ ಆ ಲೇಖಕರ ಕೃತಿಯ ಗುಣದೋಷಗಳನ್ನು ನಿಮರ್ಶಿಸುತ್ತಿದ್ದರು. ಗೆಳೆಯನ ಕೃತಿಯೆಂದು ಅದರದೋಷಗಳನ್ನು ಮುಚ್ಚುತ್ತಿರಲಿಲ್ಲ. ಹಳಗನ್ನಡ ಕಾವ್ಯವಾದರೇನು, ವ್ಯಾಕರಣವಾದರೇನು, ಅಲಂಕಾರವಾದರೇನು, ಛಂದಸ್ಸಾದರೇನು—ಅಧಿಕಾರವಾಣಿಯಿಂದ ಆಯಾ ವಿದ್ಯಾರ್ಥಿಗಳ ಯೋಗ್ಯತೆ ಅಂತಸ್ತುಗಳನ್ನು ಅರಿತು ಅದಕ್ಕನುಗುಣವಾಗಿ

ಹೇಳಿ ಕೊಡುತ್ತಿದ್ದರು. ಅವರು ಪಂಡಿತರಾಗಿದ್ದರಲ್ಲದೆ ರಸಿಕ ವಿಮರ್ಶಕರೂ ಆಗಿದ್ದು ದರಿಂದ ತಾವು ಹೇಳಿಕೊಡುವ ಕೃತಿಯನ್ನು ಅರ್ಥೈಸುವುದರ ಜೊತೆಗೆ ಅದರ ಭಾವ ಸೌಂದರ್ಯವನ್ನು ಛಂದೋ ವಿಲಾಸವನ್ನೂ ವಿವರಿಸುತ್ತಿದ್ದರು. ಒಮ್ಮೊಮ್ಮೆ ಅವರಿಗೂ ಸಕಾರಣವಾಗಿ ಕೋಪ ಉಕ್ಕಿರುವುದೂ ಉಂಟು. ಆದರೆ ಮರುಗಳಿಗೆ ಯಲ್ಲಿಯೇ ಮಿಡುಕುವವರೂ ಅವರೆ.

ಆಚಾರ್ಯರ ಕೋಪಕ್ಕೆ ಗುರಿಯಾದ ವಿದ್ಯಾರ್ಥಿ ಹೆದರಬೇಕಾಗಿರಲಿಲ್ಲ. ಮಾರನೆಯ ದಿನವೋ ಅದರ ಮಾರನೆಯ ದಿನವೋ ಗುರುಗಳ ಹಾದಿಯನ್ನು ಕಾಯ್ದು 'ನಮಸ್ಕಾರ ಸಾರ್' ಎಂದು ಕೈ ಮುಗಿದರೆ ಆಗ ಕಾಣುವುದು ಹಸು ಮಗುವಿನ ಹದುಳು ಮನಸ್ಸು. ಸ್ವಲ್ಪ ಹೊತ್ತು ನಿಂತು ತಮ್ಮ ಜೇಬಿನಿಂದ ನಸ್ಯದ ಡಬ್ಬಿಯನ್ನು ಹೊರತೆಗೆದು ಅದರ ತಲೆಯನ್ನು ಮೆಲ್ಲಗೆ ತಟ್ಟಿ ಮುಚ್ಚಳ ತೆಗೆಯುತ್ತ "ಚೆನ್ನಾಗಿ ಓದುತ್ತಿದ್ದೀಯೇನಯ್ಯ- ಎಂದು ವಾತ್ಸಲ್ಯದಿಂದ ಕೇಳಿದರೆ ಈ ಶಿಷ್ಯನಿಗೆ ಅನಂಪವೋ ಆನಂದ.

ಶ್ರೀ ಆಚಾರ್ಯರಿಗೆ ಶಿಷ್ಯರಾದವರು ಕಡೆಯತನಕ ಶಿಷ್ಯರೆ. ಇವರಲ್ಲಿಯೇ ಕಲಿತು ಇತರ ಕೈ ಕೆಳಗೆ ಅಧ್ಯಾಪಕರಾಗಿ ಕೆಲಸ ಮಾಡುತ್ತಿರುವವರಿಗೆಲ್ಲ ಇವರು ಯಾವ ಕಾಲಕ್ಕೂ ಮೇಸ್ಟರೇ. ಅವರಿಗೆ ಅರ್ಥವಾಗದಿದ್ದ ಪದ್ಯವನ್ನೋ ಪದ್ಯಭಾಗವನ್ನೋ ಹೇಳಿ 'ಸಾರ್ ಇದರ ಅರ್ಥ ಸ್ಪಷ್ಟವಾಗಲಿಲ್ಲ. ಎಂದರೆನ್ನಿ. ಇವರು ಇವರದೇ ಆದ ದಪ್ಪ ಧ್ವನಿಯಲ್ಲಿ, ''ಕೊಂಚ ಆಲೋಚನೆ ಮಾಡಿ ನೋಡಯ್ಯ'' ಎಂದುಬಿಡು ತ್ತಿದ್ದರು. ಅವರ ಉದ್ದೇಶ,ಹೇಳಿಕೊಡಬಾರದು ಎಂದಲ್ಲ: ತರುಣ ಅಧ್ಯಾಪಕರು ಮೈ ಬಗ್ಗಿಸಿ ಮನಬಗ್ಗಿಸಿ ಪ್ರಾಚೀನ ಗ್ರಂಥಗಳನ್ನು ಓದಲಿ, ಓದಿ ಅರ್ಥಮಾಡಿಕೊಳ್ಳು ವುದನ್ನು ಕಲಿಯಲಿ ಎಂಬುದು. ಆದರೂ ಕೊಂಚ ಹೊತ್ತಿನ ಮೇಲೆ ತಾವೇನೇ ಮೆಲ್ಲ ಮೆಲ್ಲನೆ ಪರ್ಯಾಯವಾಗಿ ಹೇಳಿಬಿಡುತ್ತಿದ್ದರು. ಯಾವುದಾದರೊಂದು ಅಪೂರ್ವ ಪದವನ್ನು ಪ್ರಯೋಗಪೂರ್ವಕವಾಗಿ ಹೇಳಿ, 'ಈ ಮಾತು ಮತ್ತೆಲ್ಲಿಯಾ ದರೂ ಬಂದಿದೆಯೇ ಸಾರ್' ಎಂದು ಕೇಳುತ್ತಿದ್ದವರೂ ಉಂಟು. ನಿನಗೆ ಸಿಕ್ಕ ಬಹುದು ಹುಡುಕಿ ನೋಡಯ್ಯ ಎಂದು ಅವರ ಮೊದಲ ಪ್ರತಿಕ್ರಿಯೆ. ಅನಂತರ ತಡೆಯಲಾರದೆ ''ಆ ಪದ ಇಂಥ ಜಿಲ್ಲೆಯ ಇಂಥ ತಾಲ್ಲೂಕಿನ ಇಷ್ಟನೆಯ ಶಾಸನ ದಲ್ಲಿ ಬಂದಿರುವ ಜ್ಞಾಪಕವಪ್ಪ'' ಎಂದೋ ಪ್ರಸ್ತುತ ಪ್ರಯೋಗ ಕಾವ್ಯದಲ್ಲಿದ್ದು ದಾದರೆ ಆ ಕಾವ್ಯದ ಹೆಸರನ್ನೂ ಆ ಪದ ಪ್ರಯೋಗವಾಗಿರುವ ಸಂದರ್ಭವನ್ನು ಸರಿಯಾಗಿಯೇ ಹೇಳುವರು. ಅಂಥ ಅತ್ಯದ್ಭುತ ಜ್ಞಾಪಕ ಶಕ್ತಿ ಅವರದು. ಜೊತೆಗೆ ಅದೇ ಪ್ರಮಾಣದಲ್ಲಿ ಬುದ್ಧಿಶಕ್ತಿ, ಮತ್ತು ವಿವೇಚನಾ ಶಕ್ತಿ. ಪಂಪ, ರನ್ನ, ಹರಿಹರ, ಕುಮಾರವ್ಯಾಸ, ಜೈಮಿನಿ, ರಾಘವಾಂಕ, ನಂಜುಂಡ ಮುತಾದ ಸುಪ್ರ ಸಿದ್ಧರ ರಸಭರಿತ ಕಾವ್ಯಗಳು ಇವರಿಗೆ ಕರತಲಾಮಲಕ.



ಕನ್ನಡವೇ, ಸಂಸ್ಕೃತವೇ, ತಮಿಳೆ, ತೆಲುಗೆ, ಇಂಗ್ಲೀಷ್ ಪ್ರಾಕೃತವೇ ? ಆರೆಂಟು ಭಾಷೆಗಳನ್ನು ಚೆನ್ನಾಗಿ ಬಲ್ಲವರಾಗಿದ್ದು, ಆಂಗ್ಲಸಾಹಿತ್ಯದ ಮತ್ತು ಹಲವಾರು ಭಾರತೀಯ ಸಾಹಿತ್ಯಗಳ ಪರಿಚಯ ಪಡೆದಿರುವುದರ ಜೊತೆಗೆ ವಿಜ್ಞಾನ ಸಾಹಿತ್ಯ ವಿಚಾರ ಸಾಹಿತ್ಯಗಳ ತಕ್ಕ ಮಟ್ಟಿನ ಪರಿಚಯವಿದ್ದ ಕೆಲವೇ ಕೆಲವು ಕನ್ನಡಿಗರಲ್ಲಿ ಇವರೊಬ್ಬರು.

ಕನ್ನಡ ಪ್ರಾಚೀನ ಕಾವ್ಯಗಳಲ್ಲಿನ ಹಲವಾರು ಪದಗಳಿಗೆ ಇನ್ನೂ ಅರ್ಥನಿಷ್ಕರ್ಷ ಆಗಿಲ್ಲ. ಅಂಥ ಪದಗಳ ಅರ್ಥವನ್ನು ಕಂಡು ಹಿಡಿಯಲು ಏನೆಲ್ಲ ಪ್ರಯತ್ನ ಮಾಡುತ್ತಿದ್ದರು. ಒಂದು ಸಲ ಸಂಸ್ಕೃತ "ಗಜಶಾಸ್ತ್ರ" ವನ್ನು ಭಂಡಾರದಿಂದ ಎರವಲು ಪಡೆದು ಮನೆ ಗೊಯ್ಯುತ್ತಿದ್ದರಂತೆ. ಅವರ ಶಿಷ್ಯ ಎಂದಿನಂತೆ ಶರಣುಮಾಡಿ "ಈ ಗಜವೈದ್ಯ ಏಕೆ ಬೇಕಿತ್ತು ಸಾರ" ಎಂದು ಕೇಳಿದ. "ನೋಡಬೇಕಾಗಿದೆ ಕಣಯ್ಯ" ಎಂಬುದಷ್ಟೇ ಅವರ ಉತ್ತರ. ಯಾವ ಕಾವ್ಯದಲ್ಲಿಯೋ ಗಜಶಾಸ್ತ್ರಕ್ಕೆ ಸಂಬಂಧಿಸಿದ ಮಾತು ಕಾಣಿಸಿಕೊಂಡಿರಬೇಕು. ಅದರ ಸರಿಯಾದ ಅರ್ಥವೇನೆಂಬುದು ಇವರಿಗೆ ಗೊತ್ತಾಗ ಬೇಕಿತ್ತು. ಅದುದರಿಂದ ಆ 'ಗಜವೈದ್ಯ' ದ ಅಭ್ಯಾಸ. ನಾಟ್ಯಶಾಸ್ತ್ರದ ಒಂದು ಮಾತು ಬಂದಿತೆಂದರೆ ನಾಟ್ಯಶಾಸ್ತ್ರವನ್ನು, ಸಂಗೀತ ಶಾಸ್ತ್ರಗಳ ಪದಗಳ ಸುಸ್ಪಷ್ಟ ಅರ್ಥವನ್ನು ತಿಳಿಯಲು ಆ ಗ್ರಂಥವನ್ನು, ಆದ್ಯಂತ ಪರಿಶೀಲಿಸದೆ ಬಿಡುವವರಲ್ಲ. ಸೋದರ ಭಾಷೆಯ ನಿಘಂಟುಗಳನ್ನು ಇವರು ನೋಡಿದಷ್ಟು ಬೇರೆಯವರು ನೋಡಿದುದಿಲ್ಲ.

ಹೊಸದಾಗಿ ಉಪಾಧ್ಯಾಯನಾದ ಶಿಷ್ಯನೊಬ್ಬನಿಗೆ ಅವರು ಹೇಳಿದ ಬುದ್ಧಿಮಾತುಗಳು ಯಾರು ನೆನಪಿಟ್ಟುಕೊಳ್ಳತಕ್ಕುವು. "ಹಳಗನ್ನಡದ ಪ್ರೌಢ ಗ್ರಂಥಗಳನ್ನು ಮರೆಯ ಬೇಡ. ಪಂಪರನ್ನಾದಿಗಳಿಂದ ದಿನಕ್ಕೆ ಹತ್ತು ಪುಟದಷ್ಟನ್ನಾದರೂ ಓದದೆ ಮಲಗು ವುದು ಮಹಾಪರಾಧ. ಉಪಾಧ್ಯಾಯ ವೃತ್ತಿ ಬಹು ಮುಖ್ಯವಾದದ್ದು. ಅದಕ್ಕೆ ಪಾಂಡಿತ್ಯ ಅತ್ಯವಶ್ಯಕವಾದ ಸಾದನ. ಕಲಿತ ವಿದ್ಯೆಯನ್ನು ದಿನೇ ದಿನೇ ಬಲ ಪಡಿಸಿ ಕೊಂಡು, ಕುಂದದ ಆಸಕ್ತಿಯಿಂದ ಅದನ್ನು ಶಿಷ್ಯರಿಗೆ ಧಾರೆಯೆರೆಯುವ ಉಪಧ್ಯಾಯ ನಿಜವಾಗಿ ಕೃತ ಕೃತ್ಯ. ಆ ಆನಂದಕ್ಕೆ ಸಮಾನಾದುದು ಮತ್ತೊಂದಿಲ್ಲ-ಎಂದು ಮುಂತಾಗಿ ನುಡಿದಿದ್ದಾರೆ.

ಶ್ರೀ ಡಿ. ಎಲ್. ಎನ್ ಅವರು ಉತ್ತಮ ವರ್ಗದ ಉಪಾಧ್ಯಾಯರಾಗಿದ್ದರಲ್ಲದೆ ಅನೇಕ ಹಳಗನ್ನಡ ಗ್ರಂಥಗಳನ್ನು ಸಂಪ್ರತಿಸಿ ಸಂಶೋಧಿಸಿ ಸಮುಚಿತವಾದ ಪೀಠಿಕೆ, ಅನುಬಂಧ ಟಿಪ್ಪಣಿ ಮುಂತಾದ ಪರಿಕರಗಳೊಂದಿಗೆ ಪ್ರಕಟಿಸಿದ್ದಾರೆ. ವಿಮರ್ಶೆ, ಮುನ್ನುಡಿ, ಪ್ರಬಂಧಗಳು ಇವರ ಲೇಖನಿಯಿಂದ ಮೂಡಿ ಬಂದಿವೆ. ಇವೆಲ್ಲವುಗಳ ಸಂಖ್ಯೆ ನೂರಕ್ಕೆ ಮೀರಿ ಇವೆ.

ಎಂಬ ದೃಷ್ಟಿಯನ್ನು ಹೊಂದಿರಬೇಕಾದ್ದು ಅವಶ್ಯಕ. ಸಿದ್ಧರಾಮನ ಪಾತ್ರದಲ್ಲಿ ರಾಘವಾಂಕ ಒಬ್ಬ ಆದರ್ಶ ಸಮಾಜ ಸೇವಕನನ್ನು ನಿರ್ಮಿಸಿದ್ದಾನೆ. ಜನ ಬದುಕಬೇಕೆಂದು ಚೆನ್ನಾಗಿ ಬದುಕಬೇಕೆಂದು ಸಿದ್ಧರಾಮನು ಪ್ರಯತ್ನಿಸಿದನು. ಅವನ ಕೆಲಸದಿಂದ ಸೊನ್ನಲಿಗೆ ಲಿಂಗಬೀಡಾಗಿ ಪುಣ್ಯದ ಪುಂಜವಾಗಿ ಮುಕ್ತಿಕ್ಷೇತ್ರವಾಗಿ ಧರ್ಮದ ಖಾನಿಯಾಗಿ ಬೆಳಗಿತು. ಪ್ರತಿಯೊಬ್ಬ ವ್ಯಕ್ತಿಯೂ ಸಿದ್ಧರಾಮನಂತೆ ತನ್ನ ಹಳ್ಳಿಯನ್ನು ಬೆಳಗಲು ಪ್ರಯತ್ನಿಸಿದರೆ ನಾಡಿಗೆ ನಾಡೇ ಏಳಿಗೆಯ ಶಿಖರವನ್ನು ಏರೀತು. ಸಿದ್ಧರಾಮನಂಥ ಜನನಾಯಕನ ಚಿತ್ರವನ್ನು ರಾಘವಾಂಕ ನಮಗೆ ತೋರಿಸಿ ಅವನಂತೆ ಕಾರ್ಯಮಾಡಿದರೆ ದೇಶದ ಅಭ್ಯುದಯ ಕ್ಷಿಪ್ರದಲ್ಲಿಯೇ ಆಗಬಲ್ಲುದೆಂಬ ಸಂದೇಶವನ್ನು ನೀಡಿದ್ದಾನೆ.

ಎಲ್ಲ ಹಳಗನ್ನಡ ಕಾವ್ಯಗಳಲ್ಲಿಯೂ ಇಂತಹ ಒಂದು ಸಂದೇಶವಿರುತ್ತದೆಯೆಂದು ಅದಕ್ಕಾಗಿ ತಡಕುವುದು ಸರಿಯಲ್ಲ. ಶ್ರೀ ದೋಲನ ಅವರ ಸಂಶೋಧನ ದೃಷ್ಟಿಗೆ ರಾಘವಾಂಕನ ಕಾವ್ಯೋದ್ದೇಶ ನಿಚ್ಚಳವಾಗಿ ಕಂಡಿದೆ. ಅದನ್ನು ಕಂಡು ಕೊಂಡಾಡಿದ್ದಾರೆ.

ಸುಕುಮಾರ ಚರಿತೆ ಎಂಬುದು ಜೈನ ಚಂಪೂಕಾವ್ಯ. ಇದನ್ನು ಸುಮಾರು ಒಂಬೈನೂರು ವರ್ಷಗಳ ಹಿಂದೆ ಶಾಂತಿನಾಥ ಎಂಬುವನು ಬರೆದ. ಈ ಕೃತಿಯನ್ನು ತ.ಸು. ಶಾಮರಾಯರೂ ಇವರೂ ಸೇರಿ ಸಂಪಾದಿಸಿ ಪ್ರಕಟಿಸಿದ್ದಾರೆ. ಗೋವಿನ ಹಾಡು ಯಾರಿಗೆತಾನೇ ಗೊತ್ತಿಲ್ಲ. ಅದನ್ನು ಉತ್ತಮ ರೀತಿಯಲ್ಲಿ ಪರಿಷ್ಕರಿಸಿ ಪ್ರಕಟಿಸಿದ್ದಾರೆ. ಹೀಗೆ ಇವರ ಹಸ್ತಪರುಷದ ಪ್ರಭಾವದಿಂದ ಅನೇಕ ಅಪ್ರಕಟಿತ ಕನ್ನಡ ಗ್ರಂಥಗಳು ಬೆಳಕು ಕಂಡುವು. ಭೀಷ್ಮಪರ್ವ, ಸಕಲವೈದ್ಯಸಂಹಿತಾಸಾರಾರ್ಣವ, ಶಬ್ದಮಣಿದರ್ಪಣಗಳೂ ಈ ಪಟ್ಟಿಗೇ ಸೇರಬೇಕಾದುವು.

ಕನ್ನಡ ಗ್ರಂಥ ಸಂಪಾದನೆ ಎಂಬುದೊಂದು ಇವರ ಸ್ವತಂತ್ರ ಗ್ರಂಥ. ಪ್ರಾಚೀನ ಕನ್ನಡ ಗ್ರಂಥಗಳನ್ನು ಸಂಪಾದಿಸುವ ಯುವಕ ವಿದ್ವಾಂಸರಿಗೆ ಇದು ಕೈಪಿಡಿಯಂತಿದೆ. ‘ಪಂಪ ಭಾರತ ದೀಪಿಕೆ’ ಎಂಬ ಹೊತ್ತಿಗೆಯನ್ನು ಬರೆದು ಮುಗಿಸಿದ್ದಾರೆ. ಈ ಎಲ್ಲ ಕಾರ್ಯಗಳಿಗೂ ಕಳಸವೆಂಬಂತೆ ಇವರು ಪ್ರಾರಂಭಿಸಿ ನಡೆಸುತ್ತಿದ್ದ ಕನ್ನಡ–ಕನ್ನಡ ಕೋಶದ ಕಾರ್ಯ. ‘ಕನ್ನಡಕ್ಕೆ ಹೊಸ ನಿಘಂಟು’ ಎಂಬ ಲೇಖನ ಬರೆದವರೇ ಇವರು, ಸುಮಾರು ಮೂವತ್ತು ವರ್ಷಗಳ ಹಿಂದೆ. ಇವರೇ ಅನೇಕ ವರ್ಷಗಳ ಕಾಲ ನಿಘಂಟಿನ ಸಂಪಾದಕರಾಗಿ ಕೆಲಸ ಮಾಡಬೇಕಾಯಿತು. ಅದೂ ಒಂದು ಯೋಗವೇ. ಆದರೆ ನಿಘಂಟಿನ ಕಾರ್ಯಕ್ಕೆ ಅವರಷ್ಟು ಸಮರ್ಥರು ಈಗೆಲ್ಲಿ ಸಿಗುತ್ತಾರೆ. ಅವರು ಅವರ ಗೆಳೆಯ ತೀ. ನಂ. ಶ್ರೀ ಅವರು ಶಬ್ದಾರ್ಥಗಳ ವಿಷಯದಲ್ಲಿ ಮಾಡುತ್ತಿದ್ದ ವಾಗ್ವಾದವನ್ನು ಕೇಳುವ ಸುಯೋಗ ಮತ್ತೆಲ್ಲಿ ?



ಗ್ರಂಥ ಸಂಪಾದನೆ ಅನೇಕರು ತಿಳಿದಿರುವಂತೆ ಸುಲಭವಾದ ಕಾರ್ಯವಲ್ಲ. ಆ ಕಾರ್ಯಕ್ಕೆ ಬಹುಲಿಪಿಜ್ಞನೂ, ಬಹುಶ್ರುತನೂ ಪಂಡಿತಶ್ರೇಷ್ಠನೂ ರಸಿಕನೂ ಆದವನೆ ಬೇಕು. ಸಂಪಾದನೆ ಮಾಡುವ ಗ್ರಂಥ ಮೊದಲ ಸಲ ಅಚ್ಚಾಗಬೇಕಾದುದಾಗಿದ್ದರೆ ಸಂಪಾದಕನ ಹೊಣೆ ಇನ್ನೂ ಗುರುತರವಾದುದಾಗಿರುತ್ತದೆ. ಶಿವಕೋಟ್ಯಾಚಾರ್ಯನ ವಡ್ಡಾರಾದನೆ ಮೊದಲು ಪ್ರಕಟವಾದುದು ಇವರ ಸಂಶೋಧನೆಯ ಫಲವಾಗಿ. ಇದು ಅತ್ಯಂತ ಹಳೆಯ ಗದ್ಯ ಕೃತಿ. ಜೈನಧರ್ಮ ಪ್ರಬೋಧವಾದ ಸ್ವಾರಸ್ಯವಾದ ಕಥೆಗಳಿವೆ ಅಲ್ಲಿ. ಅದಕ್ಕೆ ಕನ್ನಡದಲ್ಲಿ ಜೀವಕಳೆ ತುಂಬಿದ ಶ್ರೇಯಸ್ಸು ಶ್ರೀ ಆಚಾರ್ಯರದು. ಪಂಪರಾಮಾಯಣ ಎಂಬ ರಾಮಚಂದ್ರಚರಿತ ಎಂದೋ ಅಚ್ಚಾಗಿದ್ದಿತು. ಅದರ ಕರ್ತೃ ಸುಮಾರು ಕ್ರಿ. ಶ. 1100 ರಲ್ಲಿದ್ದ ನಾಗಚಂದ್ರ. ಶ್ರೀ ಆಚಾರ್ಯರು ಆಸ್ಥಾನ ಮಹಾ ವಿದ್ವಾನ್ ತಿರುವಳ್ಳೂರ್ ಶ್ರೀನಿವಾಸರಾಘವಾಚಾರ್ಯರೊಟ್ಟಿಗೆ ಪಂಪರಾಮಾಯಣ ಸಂಗ್ರಹವನ್ನು ಕೈಕೊಂಡರು. ಪೀಠಿಕೆಯಲ್ಲಿ ಶ್ರೀ ಆಚಾರ್ಯರು ಜೈನರಾಮಾಯಣಗಳ ತುಲನಾತ್ಮಕ ವಿವೇಚನೆಯನ್ನೇ ಮಾಡಿದ್ದಾರೆ. ನಾಗಚಂದ್ರನ ದುರಂತ ರಾವಣನ ಭವ್ಯ ಚಿತ್ರವನ್ನು ಕನ್ನಡಿಗರ ಚಿತ್ತ ಭಿತ್ತಿಯ ಮೇಲೆ ಬರೆದು ಬಣ್ಣಿಸಿರುವರು.

ಶ್ರೀ ಡಿ. ಎಲ್. ಎನ್. ಅವರು ಸಂಪಾದಿಸಿರುವ ಇನ್ನೊಂದು ದೊಡ್ಡ ಕೃತಿ ಸಿದ್ಧರಾಮ ಚಾರಿತ್ರ. ಈ ಕೃತಿ ಬಹು ಹಿಂದೆಯೇ ಒಂದು ಸಲ ಅಚ್ಚಾಗಿತ್ತು. ಆದರೆ ಅದೂ ಒಂದು ಮೂಲ ಮಾತೃಕೆಯ ರೂಪದಲ್ಲಿಯೇ ಇತ್ತು. ಪ್ರೊ. ಟಿ. ಎಸ್. ವೆಂಕಣ್ಣಯ್ಯನವರೂ ಇವರೂ ಸೇರಿ ಮಾಡಬೇಕಾಗಿದ್ದ ಕೆಲಸ, ಅವರ ಅನಿರೀಕ್ಷಿತ ಮರಣದಿಂದಾಗಿ ಇವರೊಬ್ಬರೇ ಮಾಡಿ ಮುಗಿಸಬೇಕಾಯಿತು. ಈ ಕೃತಿಯ ಪೀಠಿಕೆಯಲ್ಲಿಯೂ ಶ್ರೀ ದೋಲನ ಅವರು ಅನೇಕ ಹೊಸ ಸಮಸ್ಯೆಗಳನ್ನು ಎತ್ತಿದ್ದಾರೆ. ಸಿದ್ಧರಾಮನು ಶೈವನೇ ವೀರಶೈವನೆ. ಎಂಬುದು ಅವುಗಳಲ್ಲೊಂದು. ಸಿದ್ಧರಾಮನ ಭವ್ಯ ವ್ಯಕ್ತಿತ್ವವೂ ಆತನ ಸಾಕಾರನಿಷ್ಠೆ, “ಭೂತಂಗಳೊಳಗನುಕಂಪೆ” ಮುಂತಾದ ದೈವೀಗುಣಗಳೂ ಅವರ ಪ್ರಶಂಸೆಗೆ ಪಾತ್ರವಾಗಿರುತ್ತವೆ.

‘ಸಿದ್ಧರಾಮ ಚರಿತೆ’ಯ ಸಂಗ್ರಹವನ್ನೂ ಇವರೇ ಮಾಡಿರುವವರು. ಮೂಲ ಕೃತಿಯ ಪೀಠಿಕೆಯ ಗುಣಗಳೆಲ್ಲವೂ ಇದರಲ್ಲಿಯೂ ಸೇರಿವೆ. ಇನ್ನೊಂದು ವಿಷಯವನ್ನು ಹೊಸದಾಗಿ ಸೇರಿಸಿದ್ದಾರೆ, ಅದರಲ್ಲಿ ಈಗಿನವರಿಗೆ ಸಿದ್ಧರಾಮನ ಚರಿತೆಯಿಂದ ಏನು ಸಂದೇಶವಿದೆ ಎಂಬುದನ್ನು ಕುರಿತು ಶ್ರೀ ದೋಲನ ಅವರು ಹೇಳಿದ್ದಾರೆ:

ಹಳೆಯ ಕಾವ್ಯವೊಂದನ್ನು ಹಿಡಿದು ಓದುತ್ತಿರುವಾಗ ಅದರ ರಸದಲ್ಲಿ ತಾತ್ಕಾಲಿಕವಾಗಿ ಮನ ಮುಳುಗಿ ಮೈಮರೆಯುವುದು ಪರಮ ಪ್ರಯೋಜನವಾದರೂ ನಮ್ಮ ಇಂದಿನ ಸಮಸ್ಯೆಗಳಿಗೆ ಉತ್ತರ ರೂಪವಾಗಿ ಅದು ಏನನ್ನಾದರೂ ಸೂಚಿಸುತ್ತಿದೆಯೇ

‘ಶಬ್ದ ವಿಹಾರ’ ಎಂಬುದು ಆಚಾರ್ಯರು ಬರೆದಿರುವ ಸಣ್ಣ ಪುಸ್ತಕ. ನೋಡುವುದಕ್ಕೆ ಚಿಕ್ಕದು, ವಿಷಯದ ದೃಷ್ಟಿಯಿಂದ ದೊಡ್ಡದು. ಮಾತುಗಳನ್ನೆ ಮಾತನಾಡಿಸುತ್ತ ಅವುಗಳ ಹುಟ್ಟು ಗುಟ್ಟುಗಳನ್ನು ಗುರುತಿಸುವುದು ಲೇಖಕರ ಉದ್ದೇಶ. ಈ ತೆರನ ಪುಸ್ತಕ ಕನ್ನಡದಲ್ಲಿ ಇದೊಂದೇ ಎಂದರೆ ಇದರ ಗುಣವೌಲ್ಯ ಅರ್ಥವಾದೀತು. ಇಷ್ಟೇ ಗಾತ್ರದ ಇನ್ನೊಂದು ಪುಸ್ತಿಕೆ ಹಂಪೆಯ ಹರಿಹರ ಎಂಬುದು ಹರಿಹರದೇವನ ಜೀವನ, ಕೃತಿಗಳ ಪರಿಚಯ ಆತನ ಕವಿತಾಶಕ್ತಿ, ಭಕ್ತಿ ಮುಂತಾದ ವಿಷಯಗಳನ್ನೊಳಗೊಂಡಿದೆ ಈ ಚಿಕ್ಕ ಹೊತ್ತಗೆ. ಅದನ್ನು ಎಷ್ಟುಸಲ ಓದಿದರೂ ಮತ್ತೆ ಓದಬೇಕೆನಿಸುವುದು.

ಶ್ರೀ ‘ದೊಲನ’ ಅವರು ಬರೆದಿರುವ ಸಂಶೋಧನಾತ್ಮಕ ಲೇಖನಗಳ ಸಂಖ್ಯೆ ಎಪ್ಪತ್ತಕ್ಕೂ ಮೀರಿದೆ. ಅವರ ವಿದ್ವತ್ತಿನ ವಿದ್ಯುತ್ತು ಎಷ್ಟು ದಿಕ್ಕಿಗೆ ಹರಿದಿದೆ ಎಂಬುದು ಆ ಲೇಖನಗಳ ಪಟ್ಟಿಯನ್ನು ಪರಿಶೀಲಿಸಿದರೆ ಗೊತ್ತಾಗುತ್ತದೆ. ಕವಿಚರಿತ್ರೆ, ಕವಿಯ ಕಾಲ, ಹೊಸ ಕೃತಿಯ ಪರಿಚಯ, ಹೊಸ ಕವಿಯ ಪರಿಚಯ, ಹೊಸ ಮಾತಿನ ಅರ್ಥ, ಹೀಗೆ ಹಲವಾರು ನಿಟ್ಟಿನಲ್ಲಿ ಆಚಾರ್ಯರ ದೃಷ್ಟಿ ಹರಿದಿದೆ. ಅದರ ಫಲವಾಗಿ ಫಲವತ್ತಾದ ನೂತನ ಲೇಖನಗಳು. ಏನನ್ನಾದರೂ ಹೊಸದಾಗಿ ಹೇಳುವುದಿದ್ದರೆ ಅವರು ಲೇಖನವನ್ನು ಬರೆಯುತ್ತಿದ್ದುದು. ಪ್ರಬುದ್ಧ ಕರ್ಣಾಟಕದಲ್ಲಿ ‘ಕಮ್ಮಟದ ಕಿಡಿಗಳು’ ಎಂಬ ಲೇಖನ ಮಾಲೆಯನ್ನು ಪ್ರಾರಂಭಿಸಿದ್ದು ಇವರೇ. ಹಲವು ಗ್ರಂಥಗಳಿಗೆ ಇವರು ಮುನ್ನುಡಿಗಳನ್ನು ಬರೆದುಕೊಟ್ಟದ್ದಾರೆ. ಕೆಲವು ಆಧುನಿಕ ಕೃತಿಗಳ ವಿಮರ್ಶೆಯನ್ನೂ ಮಾಡಿದ್ದಾರೆ. ಇವರ ಕಾರ್ಯಕ್ಷೇತ್ರ ತುಂಬ ವಿಶಾಲವಾದುದಾಗಿತ್ತು. ಇವರ ದೃಷ್ಟಿಯೂ ಚಿರವಿನೂತವಾಗಿರುತ್ತಿದ್ದಿತು. ಕನ್ನಡ ವಿಭಾಗದಲ್ಲಿ ಇಂಥ ಅನೇಕರು ಇದ್ದುದರಿಂದಲೇ ಕನ್ನಡ ಸಾಹಿತ್ಯ ಇಷ್ಟು ಬೇಗನೆ ಅಭಿವೃದ್ಧಿಗೆ ಬರುವುದು ಸಾಧ್ಯವಾಯಿತು.

ವಿದ್ವಾಂಸರು ಮರೆಯದೆ ಪರಿಪಾಲಿಸಬೇಕಾಗಿದ್ದ ಸಂಪ್ರದಾಯಗಳನ್ನು ಇವರು ಯಾವಾಗಲೂ ಕಡಗಣಿಸಲಿಲ್ಲ. ತಮ್ಮ ಸಂಶೋಧನಾ ಕಾರ್ಯದಲ್ಲಿ ಯಾರಿಂದಲಾದರೂ ಬಹು ಕೊಂಚ ನೆರವು ದೊರೆತರೂ ಸಾಕು ಆ ವಿಷಯವನ್ನು, ಇಂಥವರಿಂದ ಈ ವಿಷಯ ಗೊತ್ತಾಯಿತು ಎಂದು ಪ್ರಸ್ತುತ ಲೇಖನದ ಅಡಿ ಟಿಪ್ಪಣಿಯಲ್ಲಿ ಬರೆಯುತ್ತಿದ್ದರು. ಕವಿಯ ಕಾಲದ ವಿಷಯವಾಗಿಯೋ ಶಬ್ದಾರ್ಥದ ವಿಷಯವಾಗಿಯೋ ವಿವರವನ್ನು ಕೋರಿ ಯಾರಾದರೂ ಕಾಗದ ಬರೆದರೆನ್ನಿ. ಆ ಕೂಡಲೆ ಅವರಿಗೆ ಉತ್ತರ ಬರೆಯುವ ಸೌಜನ್ಯ ಇವರಲ್ಲಿದ್ದಿತು.

ಈ ವಿದ್ವಾಂಸರಲ್ಲಿ ಇನ್ನೊಂದು ಸದ್ಗುಣವಿತ್ತು : ಇವರು ಕವಿಯ ವಿಷಯವಾಗಿಯೋ ಕವಿಕೃತಿಯಲ್ಲಿ ಹೊಗಳಲ್ಪಟ್ಟಿರುವ ನಾಯಕ ಅಥವಾ ನಾಯಿಕೆಯ ವಿಷಯವಾಗಿಯೋ ತಮ್ಮದೇ ಆದ ಒಂದು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದರೆ, ಬೇರೆ ಯಾರಾದರೂ



ವಿದ್ವಾಂಸರು ಆ ಅಭಿಪ್ರಾಯ ಸಾಧುವಲ್ಲವೆಂದು ಸಕಾರಣವಾಗಿ ತೋರಿಸಿಕೊಟ್ಟರೆ ತಮ್ಮ ಅಭಿಪ್ರಾಯವನ್ನು ತಿದ್ದಿಕೊಳ್ಳುವ ಸೌಜನ್ಯವಿತ್ತು. ಉದಾಹರಣೆಗೆ. ರಾಘವಾಂಕನ ಸಿದ್ಧರಾಮನು ವೀರಶೈವನಾಗಿರಲೇ ಇಲ್ಲ ಎಂಬುದು ಅವರ ಮೊದಲ ಸಿದ್ಧಾಂತವಾಗಿತ್ತು. ಆದರೆ ಅವರ ಶಿಷ್ಯರೊಬ್ಬರು ವಚನಗಳ ಆಧಾರವನ್ನು ಕೊಟ್ಟು ಸಿದ್ಧರಾಮನು ವೀರಶೈವನಾಗಿದ್ದನು ಎಂಬುದನ್ನು ತೋರಿಸಿಕೊಟ್ಟರು. ಶ್ರೀ ಆಚಾರ್ಯರು ತಮ್ಮ ಮೊದಲಿನ ಅಭಿಪ್ರಾಯವನ್ನು ತಿದ್ದಿಕೊಂಡು, ಆ ಬಗ್ಗೆ ಒಂದು ಪುಟ್ಟ ಲೇಖನವನ್ನೆ ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟಿಸಿದರು. ತಮ್ಮ ವಿನಯವನ್ನು ಮೆರೆದರು.

ಇನ್ನೊಂದು ಸಂದರ್ಭ : ಮೊದಲನೆಯ ಸಾರಿ ಅಚ್ಚಾದ ಸಿದ್ಧರಾಮ ಚಾರಿತ್ರ್ಯದ ಮುನ್ನುಡಿಯಲ್ಲಿ ಅಲ್ಲಮನ ಪಾತ್ರವನ್ನು ಕುರಿತು ಹೀಗೆಂದಿದ್ದರು. “ಅಲ್ಲಮನು ವ್ಯಕ್ತಿವಾದಿ ತನ್ನ ಸುಖವನ್ನು ತಾನು ಗಳಿಸಿಕೊಂಡರೆ ಸಾಕೆಂದು ಅವನ ಸಿದ್ಧಾಂತ” ಇದೇ ಸನ್ನಿವೇಶವನ್ನು ಅಂದರೆ ಅಲ್ಲಮ ಸಿದ್ಧರಾಮರು ಸಂಧಿಸಿದ ಸನ್ನಿವೇಶವನ್ನೇ ತೆಗೆದುಕೊಂಡು ಶ್ರೀ ಎಂ. ಆರ್. ಶ್ರೀನಿವಾಸ ಮೂರ್ತಿಗಳು ಬೇರೊಂದು ನಿರ್ಣಯಕ್ಕೆ ಬಂದರು. ಶ್ರೀ ಡಿ. ಎಲ್. ಎನ್. ಅವರು ಮೂರ್ತಿಗಳ ಅಭಿಪ್ರಾಯವನ್ನು ಒಪ್ಪಿಕೊಂಡು ಸಿದ್ಧರಾಮಚರಿತೆಯ ಸಂಗ್ರಹದ ಮುನ್ನುಡಿಯಲ್ಲಿ ಶ್ರೀ ಎಂ. ಆರ್. ಶ್ರೀ ಅವರ ಲೇಖನವನ್ನು ಉಲ್ಲೇಖಿಸಿದ್ದಾರೆ. ಇದು ಸುಮನಸರಾದ ವಿದ್ವಾಂಸರ ದೊಡ್ಡ ಗುಣ.

ಶ್ರೀ ದೊಲನ ಆದರ್ಶ ಪ್ರಾಧ್ಯಾಪಕರು, ಅತ್ಯುನ್ನತ ಮಟ್ಟದ ವಿದ್ವಾಂಸರು, ವಿಮರ್ಶಕರು. ಕವಿಹೃದಯವುಳ್ಳವರು ಇವೆಲ್ಲಕ್ಕಿಂತ ಮಿಗಿಲಾಗಿ ಅವರ ಮನಸ್ಸು ತುಂಬ ಸುಸಂಸ್ಕೃತವಾದುದಾಗಿತ್ತು. ಅವರ ಆತ್ಮೀಯ ಗೆಳೆಯ ತೀ. ನಂ. ಶ್ರೀ ಅವರು, ಜೀವನದಲ್ಲಿ ಪ್ರೇಮ ಎಷ್ಟು ದೊಡ್ಡದೋ ಸ್ನೇಹವೂ ಅಷ್ಟೇ ದೊಡ್ಡದು. ಪ್ರೇಮಕ್ಕೆ ಏಕವ್ಯಕ್ತಿ ನಿಷ್ಠೆಯ ನಿಯಮವುಂಟು. ಸ್ನೇಹಕ್ಕಾದರೆ ಆ ಪರಿಮಿತಿಯೂ ಇಲ್ಲ. ನರಸಿಂಹಾಚಾರ್ಯರಂತಹ ದೊಡ್ಡ ಮನಸ್ಸಿನ ಪ್ರಿಯಮಿತ್ರರನ್ನು ಪಡೆದಿರುವುದು ನನ್ನ ಭಾಗ್ಯ ವಿಶೇಷ. ನರಸಿಂಹಾಚಾರ್ಯರಂಥ ಮಿತ್ರರನ್ನು ನೆನೆದಾಗ, “ಕೇನಾ ಮೃತಮಿದಂ ಸೃಷ್ಟಂ ಮಿತ್ರಮಿತ್ಯ ಕ್ಷರ ದ್ವಯಂ” ಎಂದು ಚಿಕ್ಕಂದಿನಲ್ಲಿ ಓದಿದ ಸುಭಾಷಿತ ಪಂಕ್ತಿ ನೆನಪಾಗುತ್ತದೆ. ಈ ಸನ್ಮಿತ್ರನ ಅಪರಂಜಿಯಂತಹ ಮನಸ್ಸಿನ ಅರಿವು ಕನ್ನಡಿಗರಿಗೆಲ್ಲ ಚೆನ್ನಾಗಿ ಉಂಟಾಗಲಿ ಎಂದಿರುವರು.

ಈಗ “ದೊಲನ” ನಮ್ಮೆದುರಿಗಿಲ್ಲ. ಅವರು ಆದರ್ಶ ಪ್ರಾಧ್ಯಾಪಕರಾಗಿದ್ದರೆಂಬ ಸಂಗತಿಯೂ ಅವರ ವಿದ್ಯಾರ್ಥಿಗಳು ಇರುವವರೆಗೆ ಇರತಕ್ಕದು. ಆದರೆ ಅವರು ಸಾಹಿತ್ಯ ಪ್ರಪಂಚದಲ್ಲಿ ಮಾಡಿದ ಕಾರ್ಯ ಶಾಶ್ವತವಾಗಿರುವುದು. ಕನ್ನಡ ಸಾಹಿತ್ಯ ಇರುವವರೆಗೆ ಇರತಕ್ಕದು. ಆದುದರಿಂದ ಇವರು ಎಲ್ಲರಿಗೂ ಎಲ್ಲ ಕಾಲಕ್ಕೂ ಓಜರೇ,

# ಶಾಲೆಗಳಲ್ಲಿ ಲೈಂಗಿಕ ಶಿಕ್ಷಣ ಅಗತ್ಯವೆ?

**—ಪ. ರಾಮಕೃಷ್ಣ ಶಾಸ್ತ್ರಿ**

ಮಕ್ಕಳಿಗೆ ಲೈಂಗಿಕ ಶಿಕ್ಷಣ ಕೊಡಬೇಕೆ ಬೇಡವೆ ಎಂಬ ಕುರಿತು ಎಲ್ಲಾ ಪ್ರಗತಿಪರ ರಾಷ್ಟ್ರಗಳ ಶಿಕ್ಷಣ ತಜ್ಞರೂ ಜಿಜ್ಞಾಸೆಗೊಳಗಾಗಿದ್ದಾರೆ. ಭಾರತದಲ್ಲೂ ಮಕ್ಕಳಿಗೆ ಕಾಮಶಾಸ್ತ್ರದ ಮೇಲೆ ಶಿಕ್ಷಣ ಕೊಡುವುದರ ಬಗ್ಗೆ ಅನೇಕರು ಒಮ್ಮತ ತೋರಿಸಿದ್ದಾರೆ. ಆದರೆ ಕಾಮವೆಂಬುದು ಗಂಡು ಹೆಣ್ಣಿನ ಒಂದು ರಹಸ್ಯ ಕ್ರಿಯೆ. ಅದರಲ್ಲಿ ಯಾವ ಪೂರ್ವಭಾವಿ ಶಿಕ್ಷಣವೂ ಇಲ್ಲದೆ ಯುವಕ ಯುವತಿಯರು ಬೆರೆಯಬಲ್ಲರು. ಎಳೆಯ ಮಕ್ಕಳಿಗೆ ಅದನ್ನು ಕಲಿಸುವುದೆಂದರೆ ಪಾಪಬುದ್ಧಿಯನ್ನು ಅವರಲ್ಲಿ ಉದ್ದೀಪನಗೊಳಿಸಿದಂತೆ. ಕಾಮವನ್ನು ಕುರಿತು ಪ್ರಶ್ನಿಸುವುದೇ ಮಹಾಪಾಪ ಎಂದು ಸಂಪ್ರದಾಯಶೀಲ ತಂದೆ ತಾಯಿಗಳು ಕೆರಳುವುದುಂಟು. ಶಿಕ್ಷಣವೇತ್ತರು ಹೇಳುವುದೇ ಬೇರೆ. ಮಕ್ಕಳಿಗೆ ಸರಿಯಾದ ಲೈಂಗಿಕ ಜ್ಞಾನದ ಅಭಾವವಿರುವುದರಿಂದ ಅವರು ಅನೇಕ ದುಶ್ಚಟಗಳ ದಾಸರಾಗಿದ್ದಾರೆ; ಸರಿಯಾದ ತಿಳುವಳಿಕೆಯನ್ನು ಅವರಿಗೆ ನೀಡಿದರೆ ಅವರು ಕಾಮದ ವಿಚಾರದಲ್ಲಿ ಹಿತವಾದ ಸುಖಕಲ್ಪನೆಯನ್ನು ಮೂಡಿಸಿಕೊಂಡು ಜೀವನವನ್ನು ಆನಂದದಿಂದ ಅನುಭವಿಸಬಲ್ಲರೆಂದೂ ಹೇಳುತ್ತಾರವರು. ಕೆಲವು ಶಿಕ್ಷಣವೇತ್ತರು ಮಕ್ಕಳ ವಯಸ್ಸಿಗನುಗುಣವಾಗಿ ತಂದೆತಾಯಿಗಳೇ ಲೈಂಗಿಕ ಪಾಠವನ್ನು ಹೇಳಬೇಕೆಂದೂ ಇನ್ನು ಕೆಲವರು ಇದ್ದ ವಿಚಾರವನ್ನು ಮುಚ್ಚಿಡದೆ ನೇರವಾಗಿ, ಉಳಿದ ಪಾಠಗಳನ್ನು ಬೋಧಿಸುವ ಕ್ರಮದಲ್ಲೇ ಇದನ್ನೂ ಬೋಧಿಸಬೇಕೆಂದೂ ವಾದಿಸುವುದುಂಟು.

ಆದರೆ ಈ ಲೈಂಗಿಕ ಶಿಕ್ಷಣದಿಂದ ಆಗುವ ಲಾಭವೇನು? ಅದರಿಂದ ಸುಖಜೀವನದ ಕಲ್ಪನೆ ಸಾಧ್ಯವೇ? ಅದು ಕಂಟಕಗಳಿಲ್ಲದ ದಾರಿಯೇ?

ಅತಿ ಸುಧಾರಣೆಯ ಹುಚ್ಚು ಹಿಡಿದ ದೇಶಗಳಲ್ಲಿ ಸ್ವೀಡನ್ನೂ ಒಂದು. ಪ್ರಗತಿಯ ಮೇಲೆ ಹುಚ್ಚು ಜಿದ್ದು ಕಟ್ಟಿದ ದೇಶವದು. ಪ್ರಗತಿಪರ ಮತ್ತು ಸಮಾಜವಾದಿ ವಿಚಾರಧಾರೆಗಳಿಂದ ಸ್ವೀಡನ್ನಿನಲ್ಲಿ 'ಗರೀಬೀ ಹಟಾವೋ' ಕಾರ್ಯಕ್ರಮ ಯಶಸ್ವಿಯಾದ ಹಂತವನ್ನೇ ಮುಟ್ಟಿದೆ. ಅದರ ಪ್ರಗತಿಪರ ವಿಚಾರಗಳಲ್ಲಿ ಲೈಂಗಿಕ ಶಿಕ್ಷಣವೂ ಒಂದು.

ಕೆಲವು ವರ್ಷಗಳ ಹಿಂದೆ ಸ್ವೀಡನ್ನಿನಲ್ಲಿ ಕಾಮದ ವಿಷಯದಲ್ಲಿ ಬಹಳ ಮುಚ್ಚುಮರೆ, ಸಂಪ್ರದಾಯದ ಕಡಿವಾಣವಿತ್ತು. ಅಲ್ಲಿ ಕಾಮದ ಪರವಾಗಿ ಕ್ರಾಂತಿಯೆಬ್ಬಿಸಿದವರು ಡಾ|| ಎಲಿಸ್ ಒಟ್ಟೊಸನ್ ಜೆನ್‌ಸನ್‌ರೆಂಬ ಮಹಿಳಾ ಸಾಧಕಿ. ಕಾಮ–ಪ್ರೇಮಗಳ



ನಾಡೋಜರೇ ಆಗಿರುವರು. ಕನ್ನಡ ಇರುವವರೆಗೆ ಇರುವವರು. ಆದುದರಿಂದ ಆ ಶ್ರೀ ಗುರುವಿಗೆ ಸಾವಿರ ಶರಣಾರ್ತಿಗಳು.

ಈ ದೊಲನ ಅವರ ಸಾಹಿತ್ಯ ಸೇವೆಯನ್ನು ಮೆಚ್ಚಿಕೊಂಡ ಕನ್ನಡನಾಡು ಅವರನ್ನು ಸಾಹಿತ್ಯಸಮ್ಮೇಳನದ ಅಧ್ಯಕ್ಷರನ್ನಾಗಿ 1960 ರಲ್ಲಿಯೆ ಆರಿಸಿ ಗೌರವಿಸಿತು. ಅಲ್ಲಿಂದೀಚೆಗೆ ಅನೇಕ ಸನ್ಮಾನ ಸಮಾರಂಭಗಳು ನಡೆದುವು. ಅವರ ಶಿಷ್ಯರೂ ಮಿತ್ರರೂ 'ಉಪಾಯನ' ಎಂಬ ಬೃಹತ್ ಸಂಪುಟವನ್ನು ಇವರಿಗೆ ಸಮರ್ಪಿಸಿದರು. ಮೈಸೂರು ಸಾಹಿತ್ಯ ಅಕೆಡೆಮಿಯಿವರು ಪ್ರಶಸ್ತಿಯನ್ನು ನೀಡಿ ಗೌರವಿಸಿದರು. ಮೈಸೂರು ವಿಶ್ವ ವಿದ್ಯಾನಿಲಯ ಡಾಕ್ಟರೇಟ್ ಪದವಿಯನ್ನಿತ್ತು ತನ್ನನ್ನು ತಾನೆ ಗೌರವಿಸಿಕೊಂಡಿತು. ಶ್ರೀ ದೊಲನ ಅದೃಷ್ಟಶಾಲಿ ಎಂದೇ ಹೇಳಬಹುದು.

ತಾ|| 27-10–1906ರಲ್ಲಿ ಚಿಕ್ಕನಾಯಕನಹಳ್ಳಿಯಲ್ಲಿ ಉದಯಿಸಿದ ಈ ಕನ್ನಡ ಮಾತೆಯ ಈ ವರಪುತ್ರನು ಕನ್ನಡನುಡಿಯ ಗುಡಿಗಾರನಾಗಿ ಅಮೂಲ್ಯ ಸೇವೆ ಸಲ್ಲಿಸಿ ತಾ|| 7–5–71ರಂದು ಕನ್ನಡ ರಸಸರಸ್ವತಿಯ ಶ್ರೀ ಪಾದಗಳನ್ನು ಸೇರಿ ಕೀರ್ತಿಕಾಯನಾದನು.

ಅವರದೇ ಆದ ಉನ್ನತ ಸಾಹಿತ್ಯ ಕೃತಿಯ ವಿಷಯದಲ್ಲಿ ಅವರು ತಳೆದಿದ್ದ ಅಭಿಪ್ರಾಯ ಎಲ್ಲರೂ ನೆನಪಿಟ್ಟುಕೊಳ್ಳತಕ್ಕುದು.

---

## ಸುಖ ದುಃಖ!

ಸಂಪತ್ತು ದವಲತ್ತು ಒಂದೆರಡು ಕಾಲ ।
ಕಷ್ಟ ಕಾರ್ಪಣ್ಯಗಳು ಸಹ ಅಷ್ಟೇ ಕಾಲ ॥
ಇದಕಾಗಿ ಮಾನವನು ಹಿಗ್ಗಿ ತಗ್ಗುವನು ।
ಶರಣನಾದವ ಕಂಡು ಕಾಣದಂತಿಹನು ॥

## ಕೊಡುಗೈ!

ಒಂದು ಕೈ ಕೊಡುವುದನು ಇನ್ನೊಂದು ಕೈ ।
ಕಾಣದಂತೀಯುವುದೆ ನಿಜವಾದ ಕೊಡುಗೈ ॥
ಇದರಿಂದ ಶಿವತಾನು ಸಂತೃಪ್ತನಾಗಿ ।
ಕೊಡುತಿಹನು ಭಕ್ತನಿಗೆ ಹೆಚ್ಚು ಹೆಚ್ಚಾಗಿ ॥

**—ಹೆಗ್ಗನಾಡಿ ಗುರುಸಿದ್ದಪ್ಪ**

ಹಾಗಿ ಅವರಲ್ಲಿ ಕಾಮದ ಕುರಿತಾಗಿದ್ದ ಅಶ್ಲೀಲ ಪಿಪಾಸೆ ಮಾಯವಾಗಿದೆ. ಪಾಯ
ಖಾನೆಯ ಗೋಡೆಗಳಲ್ಲಿ ಮತ್ತು ಇತರೆಡೆಗಳಲ್ಲಿ ಕಾಣಬರುತ್ತಿದ್ದ ಅಶ್ಲೀಲ ಭಿತ್ತಿ ಚಿತ್ರ
ಗಳು, ಬರಹಗಳು ಅಗೋಚರವಾಗಿರುವುದೇ ಇದರ ಗುರುತಾಗಿದೆ. (ನಮ್ಮ ದೇಶದಲ್ಲಿ
ಗಲ್ಲಾಪೆಟ್ಟಿಗೆ ತುಂಬಿಸಿಬಿಡುವ ವಯಸ್ಕರಿಗೆ ವಿಾಸಲಾದ ಚಿತ್ರಗಳು ಸ್ವೀಡನಿಗೆ
ಹೋದರೆ ಬಂದ ದಾರಿಗೆ ಸುಂಕವಿಲ್ಲವೆಂದು ಹಿಂತಿರುಗಬೇಕಾಗುತ್ತದೆ) ಎಂದವರೆನ್ನು
ತ್ತಾರೆ.

ಆದರೆ ಲೈಂಗಿಕ ಶಿಕ್ಷಣದಿಂದ ಲಾಭವಾಗಿದೆಯೆನ್ನುವವರು ತೆರೆಯ ಮರೆಯಲ್ಲಿರುವ
ಸಂಗತಿಗಳನ್ನು ಗುಪ್ತವಾಗಿಟ್ಟದ್ದಾರೆ. ಲೈಂಗಿಕ ಶಿಕ್ಷಣದಿಂದ ಅಲ್ಲಿ ಆದ, ಆಗು
ತ್ತಿರುವ ಅನಾಹುತಗಳನ್ನು ನೋಡಿದರೆ ಸಂಪ್ರದಾಯವಾದಿಗಳು ಈ ಲೈಂಗಿಕ ಶಿಕ್ಷಣ
'ಸಾಕಪ್ಪಾ ಸಾಕು' ಎಂದು ಮೂಗು ಮುರಿಯುವಂತಾಗಿದೆ. ವಾಸ್ತವಿಕ ಸಂಗತಿ
ಗಳನ್ನು ಯೋಚಿಸಿದರೆ ಅದೇನೂ ತಪ್ಪಲ್ಲ. ಅಹಿತಕರವಾದ ವಾತಾವರಣ ಮೂಡಿಸಿ
ರಲು ಕಾರಣ ಸುಸ್ಪಷ್ಟವಾಗಿದೆ.

ಲೈಂಗಿಕ ಶಿಕ್ಷಣ ಆರಂಭವಾದ ಮೇಲೆ ಸಂಜೆ ಹೊತ್ತಿನಲ್ಲಿ ಸ್ಟಾಕ್‌ಹೋಂನ ನೃತ್ಯ
ಮಂದಿರಗಳಿಗೆಲ್ಲಾ ಜೀವಕಳೆ ತುಂಬುತ್ತದೆ. ರಸ್ತೆಯುದ್ದಕ್ಕೂ ಕಾರುಗಳಲ್ಲಿ ವಿಹಾರ
ಹೊರಟಿರುವ ತರುಣ ತರುಣಿಯರು ಒಂದೆಡೆ ಇನ್ನೊಂದೆಡೆ ಈ ನೃತ್ಯಮಂದಿರಗಳಲ್ಲಿ
ಅವರೇ ಕೈ ಕೈ ಹಿಡಿದು ನರ್ತಿಸುತ್ತಾರೆ. ಯುವಕರು ಸಮಾನ ವಯಸ್ಸಿನ ಯುವತಿಯ
ರೊಂದಿಗೆ ಸಿನಿಮಾ ನೋಡಲು ಹೋಗುತ್ತಾರೆ. ರಾತ್ರಿ ಆ ಯುವತಿಯು ಮನೆಗೇ
ಹಿಂತಿರುಗಿ ರಾತ್ರಿಯನ್ನು ಒಟ್ಟಾಗಿ ಕಳೆಯುತ್ತಾರೆ. ಇನ್ನೂ ವಿಚಿತ್ರವೆಂದರೆ ಅಲ್ಲಿ
ಗಂಡು ಹೆಣ್ಣುಗಳೊಳಗಿನ ಪಾವಿತ್ರ್ಯವೇ ಉಳಿದಿಲ್ಲ. ಲೈಂಗಿಕ ಶಿಕ್ಷಣ ನೀಡುವಾಗ
ಶಿಕ್ಷಕರು ಮದುವೆಯ ಮೊದಲೇ ಸಂಭೋಗಿಸುವುದನ್ನು ನಿಷೇಧಿಸಿರಬಹುದು. ಗರ್ಭ
ನಿರೋಧಕ ಕ್ರಮಗಳನ್ನು ಪಾಲಿಸಿಕೊಂಡರೂ ಅದರಿಂದ ಆಕಸ್ಮಿಕಗಳು ಸಂಭವಿಸುವು
ದೆಂದು ಎಚ್ಚರಿಸಿರಬಹುದು. ಆದರೆ ಮದುವೆಗೆ ಮುನ್ನ ಪುರುಷ ಸಂಪರ್ಕವಾಗದ
ಹುಡುಗಿಯರಾಗಲಿ, ಹುಡುಗಿಯರೊಂದಿಗೆ ಕೂಡದ ಹುಡುಗರಾಗಲಿ ನೂರರಲ್ಲಿ
ಒಂದಾದರೂ ಸಿಗುವಂತಿಲ್ಲ. 30ಕ್ಕಿಂತ ಕಡಿಮೆ ವಯಸ್ಸಿನ ಪ್ರತಿ 3 ಯುವತಿಯರಲ್ಲಿ
ಒಬ್ಬರಂತೆ ಅವಿವಾಹಿತ ಪುರುಷರೊಂದಿಗೆ ವಾಸವಾಗಿ ಸ್ವಚ್ಛಂದರಾಗಿದ್ದಾರೆ. 1976
ರಲ್ಲಿ ಅಲ್ಲಿ ಪ್ರತೀ ಹತ್ತರಲ್ಲೊಂದು ಮಗು ಅನೈತಿಕವಾಗಿ ಜನಿಸಿದ್ದರೆ ಈಗ ಮೂರ
ಲ್ಲೊಂದು ಶಿಶು ಅನೈತಿಕ ಸಂತಾನ !

ಸ್ವೀಡನ್ನಿನಲ್ಲಿ ನಾಚಿಕೆಯಿಂದ ತಲೆಬಾಗಿ ನಡೆಯುವ ಗುಣವೂ ಹಡುಗಿಯರಿಗೆ ಈಗ
ಇಲ್ಲ. ಲೈಂಗಿಕ ಶಿಕ್ಷಣದ ಫಲವಾಗಿ ನಮ್ಮ ಓರೆಗಣ್ಣಿನ ಮಿಂಚಿನಿಂದ, ಬಳುಕುವ
ನಡುವಿನಿಂದ ಯುವಕರನ್ನು ಮೋಹಿಸುವುದು ಸಾಧ್ಯವೆ ಆಗುವುದಿಲ್ಲ. ಅವರನ್ನು
ಉತ್ತೇಜಿಸಿ ನಮ್ಮ ಸುತ್ತು ಕುಣಿಯದಂತೆ ಮಾಡಲಾಗುವುದೇ ಇಲ್ಲ" ಎಂದು ಅಲ್ಲಿನ



ಬಗೆಗೆ ಅಜ್ಞಾನವನ್ನು ಹುಟ್ಟಿಸುವ ಹೆದರಿಕೆ, ಅಸಹ್ಯ, ಅಂಧಶ್ರದ್ಧೆಗಳನ್ನು ನಿವಾರಿಸಿ
ಮಕ್ಕಳಲ್ಲಿ ವಿವೇಕಯುಕ್ತವಾದ ಪರಿಜ್ಞಾನವನ್ನು ಉಂಟು ಮಾಡಬೇಕೆಂಬ ಉದ್ದೇಶ
ದಿಂದ ಅವರು ಕಾಮಶಾಸ್ತ್ರ ಶಿಕ್ಷಣದ ರಾಷ್ಟ್ರೀಯ ಸಮಿತಿಯೊಂದನ್ನು ಸ್ಥಾಪಿಸಿ ಒಂದು
ಚಳುವಳಿ ಹೂಡಿದರು. ತತ್ಫಲವಾಗಿ ಪಾರ್ಲಿಮೆಂಟಿನಲ್ಲಿ ಕಡ್ಡಾಯ ಲೈಂಗಿಕ ಶಿಕ್ಷಣ
ಮಸೂದೆಯು ಮಂಜೂರಾಯಿತು.

ಇಂದು ಸ್ವೀಡನ್ನಿಗೆ ಹೋದರೆ ಲೈಂಗಿಕ ತಿಳುವಳಿಕೆಯಿಲ್ಲದ ಹುಡುಗ–ಹುಡುಗಿಯರನ್ನೇ
ನೀವು ಕಾಣಲಾರಿರಿ. ತರಗತಿಗಳಲ್ಲಿ 16–17 ವಯಸ್ಸಿನ ಬಾಲಕ, ಬಾಲಕಿಯರು
ಮೈಗೆ ಮೈಯೊತ್ತಿ ಕುಳಿತುಕೊಳ್ಳುತ್ತಾರೆ. ಶಿಕ್ಷಕರು ಯಾವುದೇ ಗುಟ್ಟಿಲ್ಲದೆ ನೇರ
ವಾಗಿ ಬೋರ್ಡಿನ ಮೇಲೆ ಒಂದೊಂದಾಗಿ ಚಿತ್ರಗಳನ್ನು ಬರೆಯುತ್ತಾರೆ. ಯಾವು
ದನ್ನೂ ವಿದ್ಯಾರ್ಥಿಗಳ ಊಹಾಶಕ್ತಿಗೆ ತೆರವು ಬಿಡದೆ ಸ್ತ್ರೀ ಪುರುಷರ ಲೈಂಗಿಕ ಅವ
ಯವಗಳು, ಸಂಭೋಗ, ಶಿಶುವಿನ ಹುಟ್ಟು–ಬೆಳವಣಿಗೆ, ಕಾಮ ಸಂಬಂಧಿತ ರೋಗ
ಗಳು, ಸಂತತಿ ನಿರೋಧಕ ಕ್ರಮಗಳು ಇವನ್ನೆಲ್ಲ ಒಂದೊಂದಾಗಿ ವಿವರವಾಗಿ ತಿಳಿ
ಹೇಳುತ್ತಾರೆ. ಪಾಠದಲ್ಲಿ ದ್ರಾವಿಡ ಪ್ರಾಣಾಯಾಮವೇ ಇರುವುದಿಲ್ಲ.

ಪಾಠ ನಡೆಯುವಾಗ ವಿದ್ಯಾರ್ಥಿಗಳ ವರ್ತನೆ ಹೇಗಿರುತ್ತದೆಯೆಂದು ಸ್ವೀಡನ್ನಿನ ಶಿಕ್ಷಣ
ಇಲಾಖೆ ಒಂದು ಸಮೀಕ್ಷೆ ನಡೆಸಿ ಪ್ರತ್ಯಕ್ಷದರ್ಶಿ ವರದಿಗಳನ್ನು ಕಲೆ ಹಾಕಿತು. ಆಗೊ
ಬ್ಬರು ಹೇಳಿದ ವರದಿ ಸ್ವಾರಸ್ಯಕರವಾಗಿತ್ತು. "ಶಿಕ್ಷಕರೇನೋ ನಿರ್ವಿಕಾರದಿಂದ
ವೈಜ್ಞಾನಿಕ ಆಧಾರಗಳೊಂದಿಗೆ ವಿವರಿಸುತ್ತಿದ್ದರು. ಆದರೆ ವಿದ್ಯಾರ್ಥಿನಿಯರೂ ಅಷ್ಟೇ
ನಿರ್ವಿಕಾರದಿಂದ ಕೇಳುತ್ತಿದ್ದರೆ? ಪಾಠ ನಡೆಯುವಾಗ ಹುಡುಗರ ಮೈಗೆ ಒತ್ತಿ
ಕೊಂಡು ಕೂಡುತ್ತಿದ್ದ ವಿದ್ಯಾರ್ಥಿನಿಯರು ಇದ್ದಕ್ಕಿದ್ದಂತೆಯೇ ಕೆಂಪೇರಿ ದೂರ
ಸರಿಯುತ್ತಿದ್ದರು! ಅದಲ್ಲದೆ ತಮ್ಮ ಲೈಂಗಿಕ ಜ್ಞಾನದ ಪ್ರಭುತ್ವವನ್ನು ವ್ಯಕ್ತಪಡಿಸಲು
ವಿದ್ಯಾರ್ಥಿನಿಯರು ಶೌಚಗೃಹಗಳಲ್ಲಿ ತಮ್ಮ ತಮ್ಮೊಳಗೆ ಸಲಿಂಗ ರತಿ ಕೇಳಿಯೇ
ಮುಂತಾದ ವಿಕೃತ ಕ್ರಿಯೆಗಳಿಂದಲೂ ತೃಪ್ತರಾಗುತ್ತಿದ್ದರಂತೆ." ಒಮ್ಮೆ ಎಂಟು ವಯ
ಸ್ಸಿನ ಒಬ್ಬ ವಿದ್ಯಾರ್ಥಿ ಆರು ವರ್ಷ ಪ್ರಾಯದ ವಿದ್ಯಾರ್ಥಿನಿಯೊಂದಿಗೆ ಡಾ|| ಜೆನ್‌ಸನ್‌ರ
ಬಳಿಗೆ ಬಂದು, "ಟೀಚರ್, ನಾವಿಬ್ಬರೂ ಮದುವೆಯಾದರೆ ಮಕ್ಕಳಾಗುತ್ತದೆಯೋ?"
ಎಂದು ಕೇಳಿದನಂತೆ. "ಇಲ್ಲ ಮಗು" ಎಂದರಂತೆ ಜೆನ್‌ಸನ್. ಆಗ ಆ ಹುಡುಗ
ಹುಡುಗಿಯೆಡೆಗೆ ನೋಡಿ ಹೇಳಿದನಂತೆ. "ನೋಡಿದೆಯೊ, ನಾನು ಆಗಲೇ ಹೇಳ
ಲಿಲ್ಲವೇ- ಹೆದರುವ ಅಗತ್ಯವಿಲ್ಲ ಎಂದು" ಅಂದರೆ ಅಷ್ಟು ಎಳೆಯ ವಯಸ್ಸಿನವರಿಗೂ
ಲೈಂಗಿಕಾನುಭವ ಇದೆಯೆಂದರ್ಥ.

ಸ್ವೀಡನ್ನಿನ ಲೈಂಗಿಕ ಶಿಕ್ಷಣವಾದಿಗಳಂತೂ ಇದರಿಂದ ಅಮೋಘ ಫಲ ಪಡೆದಿರುವುದಾಗಿ
ಜಾಹೀರಾತು ಮಾಡುತ್ತಾರೆ. ವಾಸ್ತವಿಕ ತಿಳುವಳಿಕೆ ಜನರಲ್ಲಿ ಮೂಡಿರುವ ಕುರು

ಹುಡುಗಿಯರು ದೂರಿಕೊಳ್ಳುತ್ತಾರಂತೆ. ಅದರ ಕಾರಣ ಸ್ಪಷ್ಟವಾಗಿಯೇ ಇದೆ. ಗಂಡು-ಹೆಣ್ಣು ಒಟ್ಟಾಗಿ ಕುಳಿತು ಲೈಂಗಿಕ ಪಾಠ ಹೇಳಿಸಿಕೊಳ್ಳಲಾರಂಭಿಸಿದ ಮೇಲೆ ಅವರ ನಡುವಣ ತೆರೆಯೇ ಮರೆಯಾಗಿ ಹೋಗಿದೆ. ಪ್ರೇಮ, ವಿರಹ, ಸವಿನೆನಪು ಇತ್ಯಾದಿತ್ಯಾದಿ ಶೃಂಗಾರ ಕಾವ್ಯದ ಶಬ್ದಗಳು ಅವರೆದುರುಸವಕಲು ನಾಣ್ಯವಾಗಿ ಬಿಟ್ಟಿದೆ. ಲೈಂಗಿಕಶಿಕ್ಷಣದಿಂದ ಅಜ್ಞಾನದ ನಿವಾರಣೆ ಮತ್ತು ವೈಜ್ಞಾನಿಕ ಮನೋವೃತ್ತಿಯ ಉದಯವೇ ಅಲ್ಲಿನ ಶಿಕ್ಷಣ ತಜ್ಞರ ದೃಷ್ಟಿಯಾಗಿದ್ದರೂ ಗಂಡುಗಳಿಗೆ ಹೆಣ್ಣೆಂದರೆ ಒಂದು ವಿಲಾಸೀ ವಸ್ತು, ರಾತ್ರಿ ಹಗಲು ಬೀದಿ ಸಿನಿಮಾ ಮಂದಿರವೆಂಬ ಪರಿಭೇದವಿಲ್ಲದೆ ಕಾಮಬಾಧೆ ತೀರಿಸುವ ಒಂದು ಸಾಮಗ್ರಿಯಾಗಿದೆ. ಸ್ವಚ್ಛಂದ ಕಾಮ ಕೇಳಿಯ ಮುಕ್ತ ದೃಶ್ಯಗಳು ಅಲ್ಲಿ ಸಾಮಾನ್ಯ

ಆದರೆ ಸ್ವೀಡನ್ನಿನ ತರುಣಿಯರಲ್ಲಿ ಲೈಂಗಿಕ ಅತೃಪ್ತಿ ಆವೇಶಿತವಾಗಿದೆ. ಅದರ ಫಲವಾಗಿ ಸಿಡುಕು, ಅಪರಾಧಿ ಮನೋವೃತ್ತಿ ಅವ್ಯಾಹತವಾಗಿದೆ. ಸ್ತ್ರೀ ಸಹಜ ಅಪೇಕ್ಷೆಯಂತೆ ಪುರುಷರು ತಮ್ಮನ್ನು ವರ್ಣಿಸಬೇಕು, ವಲಿಸಬೇಕು, ಪ್ರಸನ್ನಗೊಳಿಸಬೇಕು ಎಂಬ ಅವರ ಆಶೆಗೆ ತದ್ವಿರುದ್ಧವಾಗಿ ನಡೆಯುತ್ತಿದೆ. ಹುಡುಗರು ತಮ್ಮನ್ನು ಒಂದು ಹಸಿವು ತೀರಿಸುವ ಯಂತ್ರವೆಂದು ಭಾವಿಸಿದ್ದಾರೆಂದೂ ಹುಡುಗರಲ್ಲಿ ರಸಿಕತನವೇ ಮಾಯವಾಗಿವೆಯೆಂದೂ ಆಪಾದಿಸುವ ತರುಣಿಯರು ಈಗೀಗ ವಿದೇಶಗಳ ತರುಣರನ್ನೇ ಮದುವೆಯಾಗಲು ಹಂಬಲಿಸುತ್ತಿದ್ದಾರಂತೆ. ಅದಕ್ಕೆ ಕಾರಣ "ವಿದೇಶಿಯರು ಅರಸಿಕರಲ್ಲ."

ದಾರಿ ತಪ್ಪಿದ ಯುವತಿಯರು ವಿವಾಹಪೂರ್ವ ಗರ್ಭ ಧರಿಸುವುದು ಅಲ್ಲಿ ಸಾಮೂಹಿಕವಾಗಿದೆ. ಸಾಮಾಜಿಕ ಹಾಗೂ ಶಾರೀರಿಕ ಆರೋಗ್ಯದ ಕಾರಣಗಳಿಗಾಗಿ ಗರ್ಭಪಾತ ಮಾಡಿಸಿಕೊಳ್ಳುವುದನ್ನು ಸ್ವೀಡನಿನ ಕಾನೂನು ನಿರ್ಬಂಧಿಸಿಲ್ಲ.

ಲೈಂಗಿಕ ವಿಚಾರಗಳಲ್ಲಿ ಬಿಚ್ಚುಮನಸ್ಸಿನ ಅಭಿಪ್ರಾಯಕ್ಕೆ ಅವಕಾಶವಿರುವುದರಿಂದ ಅವಸರದ ಮದುವೆಗಳು ಮಾಮೂಲಿಯಾಗಿವೆ. ತತ್ಫಲವಾಗಿ ಪ್ರತಿ ಆರು ಮದುವೆಗಳಲ್ಲಿ ಒಂದು ವಿಚ್ಛೇದನೆಯ ಮೂಲಕ ಮುಕ್ತಾಯಗೊಳ್ಳುತ್ತವೆ. ದೇಶದ ರಾಜಧಾನಿಯಲ್ಲಿ ಪ್ರತಿ ಶತ ಕಾಲು ಭಾಗ ಮದುವೆಗಳೂ ವಿಚ್ಛೇದನಗೊಳ್ಳುತ್ತವೆ. ಅದಕ್ಕಾಗಿ ಹತ್ತಾರು ವರ್ಷ ಕೋರ್ಟಿನ ದಾರಿ ತುಳಿಯಬೇಕಾಗಿಲ್ಲ. ಗಂಡ ಹೆಂಡಿರಿಬ್ಬರೂ ಒಪ್ಪಿದರೆ ತಕ್ಷಣವೇ ಘಟಸ್ಫೋಟ. ಈ ಸಮಾಧಾನಕರ ಅಂಶವೇ ಈ ಗಡಿಬಿಡಿಯ ಮದುವೆಗಳಿಗೆ ಪ್ರೇರಕವೇನೋ !

ಮನುಷ್ಯ ಜೀವನವನ್ನು ಸುಖಮಯಗೊಳಿಸಲು ಸ್ವೀಡನ್ ಇಟ್ಟ ಹೆಜ್ಜೆಯಲ್ಲಿ ಒದಗಿದ ಇಂತಹ ಕಂಟಕಗಳು ನೂರಾರು. ಸ್ತ್ರೀ ಪುರುಷರ ಸಂಬಂಧದೊಳಗಣ ಸಮಸ್ಯೆಯ ಭ್ರಮೆಯನ್ನು ಹೋಗಲಾಡಿಸುವ ಪ್ರಯತ್ನದಲ್ಲಿ ಬಂದೊದಗಿದ ಸಂಕಟಗಳು ಹಲವಾರು. ಆದರೆ ಸಮಸ್ಯೆಗಳೇನೇ ಇರಲಿ ಈ ಯೋಜನೆಯನ್ನು ಕೈ ಬಿಡಲು ಸ್ವೀಡನ್ ಸಿದ್ಧವಾಗಿಲ್ಲ. ಜ್ಞಾನ ಪ್ರಸಾರ ಹೆಚ್ಚಾದಂತೆ ಸಮಸ್ಯೆಗಳು ಪರಿಹಾರವಾಗುತ್ತವೆ ಎಂದು ಅದರ ಅಂಬೋಣ.

ಸಿದ್ಧಗಂಗಾ



# ರಾಕ್ಷಸರು ಮತ್ತು ಕುಬ್ಜರು

ಕ್ಯಾಪ್ಟನ್ ಎಂ. ಜಿ. ಕೆ. ಮೂರ್ತಿ

ತಂದೆ-ತಾಯಿಗಳ ಆಕಾರ ಸಾಮಾನ್ಯವಾಗಿದ್ದರೂ ಕೆಲವೊಮ್ಮೆ ಅವರ ಮಕ್ಕಳು ದೈತ್ಯಾಕಾರವಾಗಿ ಇಲ್ಲವೆ ಕುಬ್ಜರಾಗಿ ಬೆಳೆದಿರುವ ದೃಷ್ಟಾಂತಗಳಿವೆ. ಶಿಶುವಿನ ಘಟಕ ಗ್ರಂಥಿಗಳಲ್ಲಾಗುವ ಯಾವುದೋ ಅಸಾಮಾನ್ಯ ಕ್ರಿಯೆ ಅಥವಾ ಯಾವುದೋ ಒಂದು ಬಗೆಯ ಬೇನೆಯಿಂದ ಎಲುಬುಗಳ ಮೇಲಾಗುವ ಪರಿಣಾಮದಿಂದ "ರಾಕ್ಷಸ" ಗಾತ್ರ [gigantism] ಅಥವಾ ಅತಿ ಗಿಡ್ಡಾದ ಬೆಳವಣಿಗೆ [dwarfism] ಉಂಟಾಗುತ್ತದೆ. 11 ವರ್ಷ ವಯಸ್ಸಿನ ಒಬ್ಬ ಬಾಲಕ 9 ಅಡಿ ಎತ್ತರಕ್ಕೆ ಬೆಳೆದು 250 ಪೌಂಡ್ ತೂಕವಿದ್ದುದರ ದಾಖಲೆ ಇದೆ. 9½ ವರ್ಷದ ಹುಡುಗಿಯೊಬ್ಬಳ ತೂಕ 27½ ಪೌಂಡ್ ಎತ್ತರ 2 ಅಡಿ 11½ ಅಂಗುಲ ಮಾತ್ರವಿದ್ದುದರ ದೃಷ್ಟಾಂತವಿದೆ.

ಬೆಲ್ಜಿಯಂನ "ರಾಕ್ಷಸ" ಫರ್ನಾಂಡ್ ಬಾಚಿಲಾರ್ಡ್‌ನ ತೂಕ 451 ಪೌಂಡು, ಎತ್ತರ 7 ಅಡಿ 7 ಅಂಗುಲ. ಬಿಹಾರದ ಶೈಲಾ ಎಂಬ 23 ವರ್ಷದ ಯುವತಿ 7 ಅಡಿಗೂ ಹೆಚ್ಚು ಬೆಳೆದಿದ್ದಾಳೆ. ಇನ್ನೂ ಬೆಳೆಯುತ್ತಿದ್ದಾಳೆ. ಅವಳ ಹಸಿವೂ ಅಗಾಧವಾಗಿ ಹೆಚ್ಚುತ್ತಿದೆ. ಛಾರ್ಲಿಮಾಗ್ನ್ ಚಕ್ರವರ್ತಿ 8 ಅಡಿ ಎತ್ತರವಿದ್ದ. 8 ಅಡಿ ಎತ್ತರದ ಒಬ್ಬ ಜರ್ಮನನ ತೂಕ 720 ಪೌಂಡ್, 1860 ರಲ್ಲಿ ಸತ್ತ ಐರ್ಲೆಂಡಿನ ಪ್ಯಾಟ್ರಿಕ್ ಕಾಟರ್‌ನ ಎತ್ತರ 8 ಅಡಿ 7 ಅಂಗುಲ; ಗೋಲಿಯತ್ ಎಂಬುವನು 8 ಅಡಿ 9 ಅಂಗುಲ ಎತ್ತರವಿದ್ದ, ಲಂಡನ್ನಿನ ಹಿಪ್ಪೊಡ್ರೋಂನಲ್ಲಿ 1905ರಲ್ಲಿ ಕಾಣಿಸಿಕೊಂಡಿದ್ದ ರಷ್ಯಾ ದೇಶದ ಫಿಯೋಡೋರ್ ಮ್ಯಾಚ್‌ನೋವ್ ಎಂಬುವನ ಎತ್ತರ 9 ಅಡಿ 3 ಅಂಗುಲ. ಈ ವ್ಯಕ್ತಿಯೇ ಇಡೀ ಜಗತ್ತಿನಲ್ಲಿ ಅತ್ಯಂತ ಎತ್ತರದವನೆಂದು ದಾಖಲೆಯಿದೆ. ಈಜಿಪ್ಟಿನ "ರಾಕ್ಷಸ" ಎಂದು ಹೆಸರಾದ ಮಹಮ್ಮದ್ ಘಾಜೀ ಎಂಬುವನು 9 ಅಡಿ 3 ಅಂಗುಲ ಎತ್ತರವಿದ್ದನಂತೆ.

18ನೇ ಶತಮಾನದಲ್ಲಿ ಪ್ರಷ್ಯಾ ದೇಶದ ರಾಜ ಫ್ರೆಡ್ರಿಕ್ ವಿಲಿಯಂ ಎಂಬಾತನ ಬಳಿ ಪಾಟ್ಸ್‌ಡಂ ಗಾರ್ಡ್ ಎಂಬ ಹೆಸರಿನ ಒಂದು ವಿಶೇಷ ಸೈನ್ಯವಿತ್ತು. ಯೂರೋಪ್ ಖಂಡದ ನಾನಾ ದೇಶಗಳಿಂದ ಅತಿ ಎತ್ತರದ ವ್ಯಕ್ತಿಗಳನ್ನು ಆರಿಸಿ ಆ ಸೈನ್ಯಕ್ಕೆ ಸೇರಿಸಲಾಗಿತ್ತು. ಕೆಲವರನ್ನು ಕದ್ದುಕೊಂಡು ಹೋಗಿ ಸೈನ್ಯಕ್ಕೆ ಭರತಿ ಮಾಡಲಾಗಿತ್ತು. ಮಧ್ಯ ಆಫ್ರಿಕದ ಬ್ರೂಂಡಿ ಜನಾಂಗದವರೂ, ರ್ವಾಂಡಾ ದೇಶದ ಟುಟ್ಸಿ ಬುಡಕಟ್ಟಿನವರೂ, ಬಹು ಎತ್ತರ ಬೆಳೆಯುತ್ತಾರೆ; ಅಲ್ಲಿ ಅನೇಕರು 7½ ಅಡಿ ಎತ್ತರ. ಸುಡಾನ್ ದೇಶದ ನ್ಯೂಅರ್ (Nuer) ಬುಡಕಟ್ಟಿನವರು ಪೃಥ್ವಿಯ ಅತ್ಯಂತ ಎತ್ತರದವರೆಂದು

ಪರಿಗಣಿಸಲ್ಪಟ್ಟಿದ್ದಾರೆ. ಆ ಜನರ ಸರಾಸರಿ ಎತ್ತರ 185 ಸೆಂಟಿಮೀಟರ್. ಮ್ಯುಗುಟೆಯ ಪಿಗ್ಮೀ ಜನಾಂಗದವರು ಪೃಥ್ವಿಯ ಅತ್ಯಂತ ಕಡಿಮೆ ಎತ್ತರದ ಕುಬ್ಜರು. ಅವರ ಸರಾಸರಿ ಎತ್ತರ 144 ಸೆಂಟಿಮೀಟರ್.

1809 ರಲ್ಲಿ ಸತ್ತ ಜಗತ್ತಿನ ಅತ್ಯಂತ ದಪ್ಪ ಪುರುಷನೆಂದು ಹೆಸರಾದ ಡ್ಯಾನಿಯಲ್ ಲ್ಯಾಂಬರ್ಟ್ ಎಂಬುವನ ಸುತ್ತಳತೆ 9 ಅಡಿ 4 ಅಂಗುಲ; ತೂಕ 739 ಪೌಂಡು. ಎಲುಬುಗಳನ್ನು ನಾಟುವ ರೋಗವು ವ್ಯಕ್ತಿಯ ಎತ್ತರವನ್ನು ವಿಪರೀತವಾಗಿ ಹೆಚ್ಚಿಸಬಹುದು. 1750 ರಲ್ಲಿ ಮೃತನಾದ ಎಡ್ವರ್ಡ್ ಬ್ರೈಟ್ ಎಂಬುವನು ಬ್ರಿಟನ್ನಿನ ಅತ್ಯಂತ ಎತ್ತರದ ವ್ಯಕ್ತಿಯಾಗಿದ್ದ; ತೂಕದಲ್ಲಿ ಲ್ಯಾಂಬರ್ಟ್ ಅವನನ್ನು ಮೀರಿಸಿದ. ಲ್ಯಾಂಬರ್ಟ್‌ನ ಒಂದು ಸೂಟಿಗೆ 14 ಗಜ(12½ ಮೀಟರ್) ಬಟ್ಟೆ ಬೇಕಾಗುತ್ತಿತ್ತು. ಅವನು ತನ್ನ ಎದೆಯ ಮೇಲೆ ಇಬ್ಬರು ಮನುಷ್ಯರನ್ನು ಮಲಗಿಸಿಕೊಂಡು ತನ್ನ ಬೆನ್ನಿನ ಮೇಲೆ ಈಜಲು ಶಕ್ತನಾಗಿದ್ದ. ಅವನನ್ನು ನೋಡಲು ಸಾವಿರಾರು ಮಂದಿ ಜನರು ನೆರೆಯುತ್ತಿದ್ದರು. ಅವನೊಂದು "ನಿಸರ್ಗದ ಕೌತುಕ" [Nature's Marvel] ವೆಂದು ವೃತ್ತಪತ್ರಿಕೆಗಳಲ್ಲಿ ಶಿರೋನಾಮವಿರುತ್ತಿತ್ತು. ಅವನು ಕುಳಿತರೆ ಅವನ ಹೊಟ್ಟೆ ಅವನ ತೊಡೆಗಳನ್ನೆಲ್ಲಾ ಮುಚ್ಚಿ ಅವನ ಮೊಣಕಾಲುಗಳು ಮಾತ್ರ ಕಾಣುತ್ತಿದ್ದವು. ದಿಂಬುಗಳನ್ನು ಧರಿಸುತ್ತಿದ್ದ. ಅವನ ಕಾಲುಗಳ ಮಾಂಸಖಂಡವು ಮುಂದಕ್ಕೆ ಚಾಚಿಕೊಂಡು ಅವನ ಕಾಲುಗಳನ್ನು ಮುಚ್ಚಿದ್ದವು.

ಅವನು ದಿನದಿನಕ್ಕೆ ಹೆಚ್ಚು ಹೆಚ್ಚು ದಪ್ಪನಾಗಿ ಬೆಳೆಯುತ್ತಾ ಹೋದ. ಅದರ ಅಗಾಧ ಗಾತ್ರವನ್ನು ಒಯ್ಯಲು ವಿಶಿಷ್ಟ ಬಗೆಯ ಗಾಡಿಯನ್ನು ತಯಾರಿಸಲಾಯಿತು. ಕೇಂಬ್ರಿಡ್ಜ್‌ನಲ್ಲಿ ಕಾಲೇಜುಗಳ ವಿದ್ಯಾರ್ಥಿಗಳು ಅವನು ಕುಳಿತಿದ್ದ ವಾಹನವನ್ನು ಬಹು ಉತ್ಸಾಹದಿಂದ ಬೀದಿಗಳಲ್ಲಿ ಎಳೆಯುತ್ತಿದ್ದರು. ಅದೊಂದು ಜೋರ್ದ್ ದೃಶ್ಯ. ಒಂದು ಪಟ್ಟಣದ ಮೇಯರ್, ಭವ್ಯದ ಮಂಡಿಯಲ್ಲಿ ಸಾರ್ವಜನಿಕರ ಜಯಜಯಕಾರದ ಘೋಷಣೆಗಳಲ್ಲಿ ಅವನನ್ನು ತಕ್ಕಡಿಯಲ್ಲಿ ತೂಕಮಾಡಿದರು. ಅವನು 1809 ರಲ್ಲಿ 39ನೇ ವಯಸ್ಸಿನಲ್ಲಿ ಮೃತನಾದ. ಅವನ ಶವದಾನಿಯು 5 ಅಡಿ ಅಗಲ, 3 ಅಡಿ ಆಳವಾಗಿತ್ತು. ಅದನ್ನು ಎಳೆಯಲು ಗಾಲಿಗಳನ್ನು ಹಾಕಲಾಯಿತು. ಅದನ್ನು ಸಮಾಧಿಯೊಳಗೆ ಇಳಿಸಲು 20 ಜನರು ಬೇಕಾಯಿತು.

1926 ರಲ್ಲಿ ಅಮೆರಿಕದಲ್ಲಿ ಹುಟ್ಟಿದ ರಾಬರ್ಟ್ ಅರ್ಲ್ ಹ್ಯೂಜಸ್‌ನ ಎತ್ತರ 6 ಅಡಿಗಳಿದ್ದರೂ ಅವನ ತೂಕ 1069 ಪೌಂಡುಗಳಿತ್ತು. ಅವನ ಸೊಂಟದ ಸುತ್ತಳತೆ 10.2 ಅಡಿಗಳು. ಅಮೆರಿಕದ ಬಾಲ್ಟಿಮೋರ್ ಎಂಬ ಊರಿನಲ್ಲಿ ಸತ್ತ ಒಬ್ಬ ನೀಗ್ರೋ ಹೆಂಗಸಿನ ತೂಕ 880 ಪೌಂಡುಗಳು.



ಐರ್ಲೆಂಡಿನ ಚಾರ್ಲ್ಸ್ ಬರ್ನ್ 8 ಅಡಿ 7 ಅಂಗುಲ ಎತ್ತರದ ವಿಕಟಾಕೃತಿಯ ರಾಕ್ಷಸನಾಗಿದ್ದ. ಅವನ ಮರಣದ ನಂತರ ಅವನ ಬೃಹತ್ ಅಸ್ಥಿಪಂಜರದ ರಚನೆಯನ್ನು ಅಭ್ಯಾಸಿಸುವುದಕ್ಕಾಗಿ ಅವನ ಕಳೇಬರವನ್ನು ಪಡೆಯಲು ಲಂಡನ್ನಿನ ವಿಖ್ಯಾತ ಸರ್ಜನ್ ಜಾನ್ ಹಂಟರ್ ಪ್ರಯತ್ನಿಸುತ್ತಿದ್ದ. ಇದನ್ನು ಅರಿತ, ಬರ್ನ್ ಮರಣಾನಂತರ ತನ್ನ ಕಳೇಬರವು ಸರ್ಜನ್‌ನಿಗೆ ಸಿಕ್ಕದಂತೆ ಅದನ್ನು ಸೀಸದ ಪೆಟ್ಟಿಗೆಯೊಳಗೆ ಹಾಕಿ ಆಳವಾದ ಸಮುದ್ರದಲ್ಲಿ ಎಸೆಯುವ ಸಿದ್ಧತೆಯನ್ನು ಮಾಡಿದ್ದ. ಆದರೆ ಹಂಟರ್ ಪಹರೆಯವರಿಗೆ 500 ಪೌಂಡುಗಳನ್ನು ಕೊಟ್ಟು ಶವಪೆಟ್ಟಿಗೆಯನ್ನು ನಡುರಾತ್ರಿಯಲ್ಲಿ ಅಪಹರಿಸಿಕೊಂಡು ಹೋದ. ಆ ಶವದ ನೆರವಿನಿಂದ ಆತನು ಅನೇಕ ಮಹತ್ತರ ಪರಿಶೋಧನೆಗಳನ್ನು ನಡೆಸಿದ. ಆ ಅಸ್ಥಿಪಂಜರವು ವೈದ್ಯ ಕ್ಷೇತ್ರದಲ್ಲಿ ಬಹು ಅಪೂರ್ವವಾದುದೆಂದು ಪರಿಗಣಿಸಲ್ಪಟ್ಟಿದೆ. ಅದನ್ನು ಇಂದಿಗೂ ಲಂಡನ್ನಿನ "ರಾಯಲ್ ಕಾಲೇಜ್ ಆಫ್ ಸರ್ಜನ್ಸ್" ಎಂಬ ಸಂಸ್ಥೆಯಲ್ಲಿ ಸಂರಕ್ಷಿಸಿ ಇಡಲಾಗಿದೆ.

ಜಾನ್ ಅರ್ಲ್ ಎಂಬ ಬೃಹದಾಕಾರದ ಅಮೇರಿಕನ್ನನ ತೂಕ ಅವನು ಹುಟ್ಟಿದಾಗ (1906 ರಲ್ಲಿ) ನಾಲ್ಕು ಪೌಂಡು ಮಾತ್ರ ಇತ್ತು. ಅವನ ಏಳನೆಯ ವಯಸ್ಸಿನಲ್ಲಿ ಅವನ ಕಾಲುಗಳೂ, ತೋಳುಗಳೂ ಏಕಾಏಕಿ ಕಾಡು ದ್ರಾಕ್ಷಿಬಳ್ಳಿಯಂತೆ ಬೆಳೆಯತೊಡಗಿದವು. ಎರಡು ವರ್ಷಗಳೊಳಗೆ ಅವನು ಆರಡಿಗಿಂತಲೂ ಹೆಚ್ಚು ಗಾತ್ರಕ್ಕೆ ಬೆಳೆದ. ಅನೇಕ ಅಂಗಡಿಗಳಲ್ಲಿ ಬೇರೆ ಬೇರೆ ಅಳತೆಗಳಿಗೆ ತಯಾರಿಸಿದ್ದ ಯಾವ ಸಿದ್ಧ ಉಡುಪೂ ಅವನಿಗೆ ಹೊಂದಿಕೆಯಾಗದೆ, ಅವನಿಗಾಗಿಯೇ ಅಳತೆಯಿಟ್ಟು ಉಡಿಗೆಗಳನ್ನು ಹೊಲಿಸಬೇಕಾಯಿತು. ಶಾಲೆಯಲ್ಲಿ ಹುಡುಗರು ಅವನನ್ನು ಕೊಕ್ಕರೆ, ಜಿರಾಫೆ, ಕ್ರೇನ್ ಯಂತ್ರ ಮುಂತಾಗಿ ಗೇಲಿಮಾಡುತ್ತಿದ್ದರು. 12 ನೆಯ ವಯಸ್ಸಿಗೆ ಅವನು ಏಳಡಿ ಎತ್ತರವಿದ್ದ. ಅವನ ಮೂಳೆಗಳು ಮೇಲೆ ಚಾಚಿಕೊಂಡು ಬೆಳೆಯುತ್ತಿರುವುದು ಅವನಿಗೇ ಕಾಣಿಸುತ್ತಾ, ಒಂದೊಂದು ಹೊಸ ದಿನವನ್ನು ಎದುರಿಸಲು ಹೆದರಿಯುತ್ತಿದ್ದ. ಅವನ ಜೋಡುಗಳ ಬೆಲೆ 125 ರೂಪಾಯಿಗಳು! ಮತ್ತಾರ ಕಾಲಿಗೂ ಸರಿಹೋಗದ ಭಾರಿ ಗಾತ್ರದ ಕಾಲುಚೀಲಗಳನ್ನು ಅವನಿಗಾಗಿ 12 ಡಜನ್‌ಗಿಂತಲೂ ಕಡಿಮೆ ಸಂಖ್ಯೆಯಲ್ಲಿ ತಯಾರಿಸಲು ಯಾವ ಕಾರ್ಖಾನೆಯವರು ಒಪ್ಪುತ್ತಿರಲಿಲ್ಲ.

ಎರಡು ಮೂರು ವರ್ಷಗಳಲ್ಲಿ ಜಾನ್ 8 ಅಡಿ 6½ ಅಂಗುಲ ಎತ್ತರ ಬೆಳೆದ. ಅವನು ತೋಳುಗಳನ್ನು ಚಾಚಿದಾಗ ಅವುಗಳ ಉದ್ದ 7 ಅಡಿ 4 ಅಂಗುಲ. ಅವನ ಕೈಗಳು ಪಿಂಗ್‌ಪಾಂಗ್ ಆಟದ ಬ್ಯಾಟ್‌ಗಳಂತೆ ಅಗಲವಾಗಿದ್ದವು. ಹೊಗೆ ಸೇದುತ್ತಿದ್ದ ಪೈಪ್‌ನ ಗಾತ್ರ ಬಟನ್‌ನಂತೆ ಇತ್ತು. ಅವನ ಒಂದು ಸೂಟ್‌ಗೆ 8 ಗಜ ಬಟ್ಟೆ ಬೇಕಾಗುತ್ತಿತ್ತು. ಟೆಲಿಫೋನಿನ ಡಯಲನ್ನು ಬೆರಳಿನಿಂದ ತಿರುಗಿಸಲು ಸಾಧ್ಯವಾಗುತ್ತಿರಲಿಲ್ಲ. ಅವನು ಕೈ ಕುಲುಕಿದಾಗ ಆ ವ್ಯಕ್ತಿಯ ಬೆರಳು ಎಲ್ಲಿ ಜಜ್ಜಿಹೋಗು

ವುವ್ರೋ ಎಂದು ಹೆದರಿ ತುಂಬಾ ಹಗುರವಾಗಿ ಹಿಡಿದುಕೊಳ್ಳುತ್ತಿದ್ದ. ಅವನ ಮೋಟಾರ್‌ಗಾಡಿ ಅವನಿಗಾಗಿಯೇ ನಿರ್ಮಾಣವಾಗಿತ್ತು. ಮುಂದಿನ ಪೀಠವನ್ನು ತೆಗೆದುಹಾಕಿ ಹಿಂದಿನ ಪೀಠದಲ್ಲೇ ಕುಳಿತು ಕಾರ್ ನಡೆಸುತ್ತಿದ್ದ. ಒಮ್ಮೆ ಅವನನ್ನು ಪೀಡಿಸುತ್ತಿದ್ದ ಒಬ್ಬ ವ್ಯಕ್ತಿಗೆ ಕೋಪಗೊಂಡ ಜಾಕ್ ಒಂದು ಗುದ್ದು ಕೊಟ್ಟಾಗ ಅವನ ಹಲ್ಲುಗಳೆಲ್ಲಾ ಉದುರಿಹೋದವು. "ಜಾಕ್! ನಿನ್ನ ತಲೆಯ ಮೇಲಿನ ಎತ್ತರದಲ್ಲಿ ಹವಾಮಾನ ಹೇಗಿದೆ? ಕೆಳಗಿನ ಹವೆಕ್ಕೂ, ಅಷ್ಟು ಎತ್ತರದ ಹವೆಕ್ಕೂ ಬಹಳ ವ್ಯತ್ಯಾಸವಿರಬೇಕು" ಎಂದು ಜನರು ಕುಚೇಷ್ಟೆ ಮಾಡುತ್ತಿದ್ದರು.

ಒಮ್ಮೆ ಅವನಿದ್ದ ಊರಿಗೆ ಒಂದು ಸರ್ಕಸ್ ಬಂದಿತ್ತು. ಬಹು ಎತ್ತರದ ರಾಕ್ಷಸನೆಂದು ಎಲ್ಲೆಲ್ಲೂ ಜಾಹಿರಾತು ಮಾಡಿ ಸಾರಿದ್ದ ಜಿಂ-ಟ್ರಾವರ್ ಎಂಬುವನು ಆ ಸರ್ಕಸ್ಸಿನ ಪ್ರಧಾನ ಆಕರ್ಷಣೆಯಾಗಿದ್ದ. ಅವನನ್ನು ನೋಡಲು ಜನರು ಘೇರಾಯಿಸುತ್ತಿದ್ದರು; ಅವನನ್ನು ಮುತ್ತಿಕೊಂಡು ಅವನ ಭಾವಚಿತ್ರಗಳನ್ನು ತೆಗೆಯುತ್ತಿದ್ದರು. ಜಾಕ್ ಮತ್ತು ಅವನ ಸ್ನೇಹಿತರು ಒಂದು ದಿನ ಆ ಸರ್ಕಸ್ಸಿಗೆ ಹೋದರು. ಜಿಂ-ಟ್ರಾವರ್‌ಗಿಂತ ಒಂದು ಅಡಿ ಎತ್ತರವಾಗಿದ್ದ ಜಾಕ್‌ನನ್ನು ನೋಡಿದ ಕೂಡಲೇ ಎಲ್ಲರ ದೃಷ್ಟಿಯೂ ಜಿಂ-ಟ್ರಾವರ್‌ನಿಂದ ಜಾಕ್ ಕಡೆಗೆ ಹರಿಯಿತು.

ಅಮೇರಿಕಾದ ರಾಬರ್ಟ್ ವಾಡಾಲೋ 8 ಅಡಿ 9½ ಅಂಗುಲ ಎತ್ತರವಿದ್ದ; ತೂಕ 411 ಪೌಂಡ್ ಮಾತ್ರ. ಅವನ ಕಾಲ 1918-1940. ಜಗತ್ತಿನಲ್ಲೇ ಎಲ್ಲರಿಗಿಂತ ಎತ್ತರದ ಸ್ತ್ರೀ ಹೆಸರು ಮೇರಿಯಟ್ ವೆವ್ರೂಟ್. ಅವಳ ಎತ್ತರ 8 ಅಡಿ 4 ಅಂಗುಲ. ವಿಶ್ವದಲ್ಲೇ ಅತಿ ಹೆಚ್ಚಿನ ತೂಕ ಹೊಂದಿದ್ದ ಮನುಷ್ಯನ ಹೆಸರು ಮಾಯಿಲ್ಸ್ ಡಾರ್ಡೇನ್. ಇವನ ತೂಕ 1000 ಪೌಂಡುಗಳು; ಎತ್ತರ 7 ಅಡಿ 3 ಅಂಗುಲ.

## ಕುಬ್ಜರು (Dwarfs)

ಕೆಲವು ಮಕ್ಕಳ ಗ್ರಂಥಿಗಳು ಹುಟ್ಟಿನಲ್ಲೇ ಅವ್ಯವಸ್ಥಿತವಾಗಿ ಅವರ ಪಿಟ್ಯೂಟರಿ (pituitary) ಗ್ರಂಥಿಗಳು ಒಸರುವ ರಸವು ಸಾಕಾಗದೆ ಅವರ ಬೆಳವಣಿಗೆಯು ಬಹಳ ಅಡಗಿ ಅವರು ಗುಜ್ಜಾರಿಗಳಾಗುತ್ತಾರೆ. ಕುಬ್ಜರ ವಿಲಕ್ಷಣವು ಜನರನ್ನು ವಿನೋದಪಡಿಸುತ್ತದೆ. ರಾಜಾಸ್ಥಾನಗಳಲ್ಲಿ ಗೌರವಾನ್ವಿತ ಅತಿಥಿ ಬಂದಾಗ ಅವನನ್ನು ಓಲಯಿಸಲು ಒಬ್ಬ ಕುಳ್ಳನನ್ನು ನಿಯೋಗಿಸುವುದು ರೂಢಿಯಾಗಿತ್ತು. ಇಂಗ್ಲೆಂಡಿನ ರಾಣಿ ಮೇರೀ ಟ್ಯೂಡರ್ ಕೇವಲ ಎರಡು ಅಡಿ ಎತ್ತರದ ಜಾನ್ ಜಾರ್ವಿಸ್ ಎಂಬ ಕುಬ್ಜನನ್ನು ರಾಜಾಸ್ಥಾನದ ಸೇವಕನನ್ನಾಗಿ ನೇಮಿಸಿದ್ದಳು. ಇಂಗ್ಲೆಂಡಿನ ರಾಜ 6ನೇ ಎಡ್ವರ್ಡ್‌ನ ಪ್ರೀತಿಪಾತ್ರನಾದ ಕುಳ್ಳ ಕ್ಸಿಟ್ ಎಂಬುವನು ಪ್ರಖ್ಯಾತ 'ಲಂಡನ್ ಟವರ್' ಎಂಬ ಸ್ಥೂಪದ ಹೆಬ್ಬಾಗಿಲಿನ ಮೂವರು "ರಾಕ್ಷಸ" ಕಾವಲುಗಾರರೊಡನೆ ಇರುತ್ತಿದ್ದ. ಐರ್ಲೆಂಡಿನ ಪ್ರಖ್ಯಾತ ಕುಳ್ಳ ಓವನ್ ಫ್ಯಾರೆಟ್ ಎಂಬಾತನ ಎತ್ತರ 3 ಅಡಿ 9 ಅಂಗುಲವಿತ್ತು.





ಬಕಿಂಗ್‌ಹ್ಯಾಂ ಡ್ಯೂಕನು ಕಸಾಯಿಯ ಮಗ ಜೆಫ್ರೀ ಹಡ್ಸನ್ 1819ರಲ್ಲಿ ಹುಟ್ಟಿದ್ದ. 9ನೇ ವರ್ಷ ವಯಸ್ಸಿನಲ್ಲಿ ಅವನ ಎತ್ತರ ಕೇವಲ 18 ಅಂಗುಲವಾಗಿತ್ತು. ಡ್ಯೂಕನ ಹೆಂಡತಿ ಅವನನ್ನು ಮೆಚ್ಚಿಕೊಂಡು ತನ್ನ ಮನೆವಾರ್ತೆಗೆ ಸೇರಿಸಿಕೊಂಡಳು. ಒಮ್ಮೆ ಅವಳು 1ನೇ ಚಾರ್ಲ್ಸ್ ರಾಜನನ್ನೂ, ಅವನ ರಾಣಿ ಹೆನ್ರಿಯೆಟ್ಟಾ ಮೇರಿಯಾಳನ್ನೂ, ಭೋಜನಕ್ಕೆ ಆಮಂತ್ರಿಸಿದಳು. ಅತಿಥಿಗಳನ್ನು ವಿಸ್ಮಯಪಡಿಸಲು ಅವಳು ಆ ಕುಳ್ಳನನ್ನು ಒಂದು ಕೇಕ್‌ನೊಳಗಿಟ್ಟು ಅದನ್ನು ಊಟದ ಮೇಜಿನಮೇಲಿಟ್ಟಳು. ಅವನನ್ನು ನೋಡಿದ ರಾಣಿ ಸ್ತಂಭೀಭೂತಳಾಗಿ ಅವನನ್ನು ಒಯ್ದು ತನ್ನ ಕುಟುಂಬದಲ್ಲಿ ಅನೇಕ ವರ್ಷಗಳ ಕಾಲ ಕೆಲಸಕ್ಕಿಟ್ಟಳು.

ಒಮ್ಮೆ ರಾಣಿ ಅವನನ್ನು ಒಂದು ಸಂದೇಶ ಒಯ್ಯಲು ಪ್ಯಾರಿಸ್ ನಗರಕ್ಕೆ ಕಳುಹಿಸಿದಳು. ಕೆಲವು ಕಡಲ್ಗಳ್ಳರು ಅವನ ಹಡಗನ್ನು ಹಿಡಿದು ಅವನನ್ನು ಸೆರೆಹಿಡಿದರು. ಅವನು ಸೆರೆಯಿಂದ ತಪ್ಪಿಸಿಕೊಂಡು ರಾಣಿಯ ಬಳಿಗೆ ವಾಪಸ್ಸಾದ. ಸ್ವರಾಷ್ಟ್ರ ಕಲಹವು ಸ್ಫೋಟವಾದಾಗ ಹಡ್ಸನ್ ಕುದುರೆ ಸವಾರನ ಸಮವಸ್ತ್ರವನ್ನು ಧರಿಸಿ ಅಶ್ವದಳದ ಕ್ಯಾಪ್ಟನ್ ಆದ. ಅವನ ಅನುಪಮ ಶೌರ್ಯಕ್ಕಾಗಿ ರಾಜನು ಅವನಿಗೆ "ಸರ್" ಎಂಬ ಬಿರುದು ಕೊಟ್ಟ. ರಾಣಿ ತನ್ನ ಪ್ರಾಣ ಉಳಿಸಿಕೊಳ್ಳಲು ಪ್ಯಾರಿಸ್‌ಗೆ ಪಲಾಯನ ಮಾಡಿದಾಗ ಸರ್ ಜೆಫ್ರಿ ಅವಳೊಡನೆ ದೇಶತ್ಯಾಗ ಮಾಡಿದ. ಅಲ್ಲಿ ಅವನು ಎರಡು ಪ್ರಖ್ಯಾತ ದ್ವಂದ್ವಯುದ್ಧಗಳಲ್ಲಿ ಗೆದ್ದ. ಅವುಗಳಲ್ಲೊಂದರಲ್ಲಿ ಅವನನ್ನು ಅವನ ಎದುರಾಳಿಯ ಮಟ್ಟಕ್ಕೇರಿಸಲು ಅವನನ್ನು ಎತ್ತಿ ಒಂದು ಕುದುರೆಯ ಮೇಲೆ ಕೂಡಿಸಬೇಕಾಯಿತು. ಆಗ ಅವನ ಎತ್ತರವು ಏಕಾಏಕಿ 3 ಅಡಿ 9 ಅಂಗುಲಗಳಿಗೇರಿತು. ಅವನ ಭಾವಚಿತ್ರ ಹ್ಯಾಂಪ್ಟನ್ ಕೋರ್ಟ್‌ನಲ್ಲಿದೆ. ಅವನ ಉಡಿಗೆತೊಡಿಗೆ ಮತ್ತು ಕಾಲುಚೀಲಗಳು ಆಕ್ಸ್‌ಫರ್ಡ್‌ನ ಮ್ಯೂಜಿಯಂನಲ್ಲಿವೆ.

ರಾಣಿ ಹೆನ್ರಿಯೆಟ್ಟಾ ಮೇರಿಯಳ ಅರಮನೆಯ ಮನೆವಾರ್ತೆಯಲ್ಲಿದ್ದ ರಿಚರ್ಡ್ ಗಿಬ್‌ಸನ್ ಎಂಬ ಇನ್ನೊಬ್ಬ ಕುಳ್ಳ ಚಿತ್ರಗಾರನಾಗಿದ್ದ. ಅವನ ಅಮೂಲ್ಯ ಚಿತ್ರಕಲೆಗಳು "ವಿಂಡ್‌ಸರ್ ಕ್ಯಾಸಲ್" ಅರಮನೆಯಲ್ಲಿ ಇಡಲ್ಪಟ್ಟಿವೆ. ಒಂದನೇ ಚಾರಲ್ಸ್ ರಾಜನು ಅವನನ್ನು ತನ್ನ ಮನೆವಾರ್ತೆಯಲ್ಲಿದ್ದ ಆನ್ ಷಪ್ಪರ್ಡ್ ಎಂಬ ಇನ್ನೊಬ್ಬ ಕುಬ್ಜಳಿಗೆ ಲಗ್ನಮಾಡಿದ. ಅವರಿಗೆ ಏಳು ಮಕ್ಕಳಾದವು; ಅವರಲ್ಲಿ ನಾಲ್ವರು ಕುಬ್ಜರಾಗಿದ್ದರು. ಗಿಬ್‌ಸನ್ 74ನೇ ವರ್ಷ ವಯಸ್ಸಿನಲ್ಲಿ ಸತ್ತ, ಅವನ ಹೆಂಡತಿ 89ನೇ ವಯಸ್ಸಿನಲ್ಲಿ ಸತ್ತಳು.

ರಾಜಕುಮಾರಿ ಪೌಲಿನ್ ಎಂದು ಕರೆಯಲ್ಪಡುತ್ತಿದ್ದ ಡಚ್ ಮಹಿಳೆ 19ನೆಯ ವಯಸ್ಸಿನಲ್ಲಿ 23.2 ಅಂಗುಲ ಎತ್ತರವಿದ್ದಳು. ಆಗ ಅವಳ ತೂಕ 9 ಪೌಂಡ್ ಇತ್ತು. ಭಾರತದ ನೃತುರಾಮ್ ಎಂಬುವನು 28 ಅಂಗುಲಗಳಷ್ಟು ವಾಮನಾವತಾರಿಯಾಗಿದ್ದ. ಜಗತ್ತಿನಲ್ಲಿಯೇ ಅತಿ ಕಡಿಮೆ ತೂಕದ ಮಹಿಳೆ ಮೆಕ್ಸಿಕೋದ ಲೂಸಿಯಾ. ಅವಳು

17ನೆಯ ವಯಸ್ಸಿನಲ್ಲಿ $26\frac{1}{4}$ ಅಂಗುಲ ಎತ್ತರ, 4.7 ಪೌಂಡ್ ಭಾರವಾಗಿದ್ದಳು. ವಿಶ್ವದಲ್ಲಿಯೇ ಅತಿ ಹೆಚ್ಚು ಮಕ್ಕಳನ್ನು ಪಡೆದ ರಷ್ಯಾಥ ವ್ಯಾಸಿಟೆಲ್ ದಂಪತಿಗಳಿಗೆ ಒಟ್ಟು 69 ಮಕ್ಕಳಿದ್ದರಂತೆ ; ಅವರು 16 ಅವಳಿ-ಜವಳಿಗಳು, 7 ತ್ರಿವಳಿಗಳು, 4 ಚತುರ್ವಳಿಗಳನ್ನು ಪಡೆದಿದ್ದರು.

ಅತ್ಯಂತ ಪ್ರಖ್ಯಾತ ಕುಬ್ಜನೆಂದರೆ ಟಾಂ ಥಮ್ (Tum Thumb) ಎಂಬುವನು. ಅವನ ಹೆಸರು ಇತಿಹಾಸ ಪ್ರಸಿದ್ಧವಾಗಿದೆ. ಅವನು 1837ರಲ್ಲಿ ಅಮೇರಿಕದಲ್ಲಿ ಬ್ರಿಟಿಷ್ ವಂಶದಲ್ಲಿ ಹುಟ್ಟಿದ, ಅವನು ಹುಟ್ಟಿದಾಗ ಸಾಮಾನ್ಯ ಮಗುವಿನಂತಿದ್ದ. ಅವನ ನಿಜವಾದ ಹೆಸರು ಚಾರಲ್ಸ್ ಸ್ಟ್ರಾಟನ್, 6 ತಿಂಗಳುಗಳಲ್ಲಿ ಅವನ ಎತ್ತರ 2 ಅಡಿ 1 ಅಂಗುಲ, ತೂಕ 15 ಪೌಂಡ್ ಅನಂತರ ಅವನ ಬೆಳವಣಿಗೆ ನಿಂತೇ ಹೋಯಿತು.

ಈ ಗುಜ್ಜಾರಿ ಗಿಡ್ಡನನ್ನು ರಂಗಭೂಮಿಯ ವೇದಿಕೆಯ ಮೇಲೆ ಪ್ರದರ್ಶಿಸಿದರೆ ತಾನು ಭಾರಿ ಶ್ರೀಮಂತನಾಗಬಹುದೆಂದು ಯೋಚಿಸಿ ಬಾರ್ನಮ್ ಎಂಬೊಬ್ಬ ಅಮೆರಿಕನ್ನನು ಅವನ ತಂದೆ-ತಾಯಿಗಳಿಗೆ ಅಪಾರ ಹಣ ಕೊಟ್ಟು ಅವನನ್ನು ಕೊಂಡುಕೊಂಡ. ಅವನಿಗೆ ನೃತ್ಯ, ಹಾಡುಗಾರಿಕೆ, ನಕಲಿ, ಪ್ರಸಿದ್ಧ ವ್ಯಕ್ತಿಗಳನ್ನು ಅನುಕರಿಸುವುದು ಮುಂತಾದವುಗಳಲ್ಲಿ ಶಿಕ್ಷಣ ಕೊಡಿಸಿ ಅವನಿಗೆ "ಟಾಂ ಥಮ್" ಎಂದು ಹೆಸರು ಕೊಟ್ಟ. ಗಿಡ್ಡನು ನೆಪೋಲಿಯನ್‌ನನ್ನು ಬಹು ಚೆನ್ನಾಗಿ ನಟಿಸುತ್ತಿದ್ದುದರಿಂದ ಕೊನೆಗೆ ಅವನಿಗೆ "ಜೆನರಲ್ ಟಾಂ ಥಮ್" ಎಂಬ ಹೆಸರು ಬಂತು. ಈ ಅನುಕರಣೆಯನ್ನು "ಡ್ಯೂಕ್ ಆಫ್ ವೆಲಿಂಗ್ಟನ್"ನು ಬಹಳ ಮೆಚ್ಚಿದ. ಗಿಡ್ಡನಿಗೆ ಆಗ ಏಳು ವರ್ಷ ವಯಸ್ಸು, ಅವನ ಪ್ರತಿಭಾ ಶಕ್ತಿಯು ಅಮೇರಿಕ ಮತ್ತು ಇಂಗ್ಲೆಂಡಿನ ಜನರನ್ನು ಆಕರ್ಷಿಸಿತು. ಅವನು ಮೂರು ಸಾರಿ ಇಂಗ್ಲೆಂಡಿಗೆ ಹೋಗಿದ್ದಾಗ ವಿಕ್ಟೋರಿಯ ರಾಣಿ ಪ್ರತಿಸಲವೂ ಅವನನ್ನು ಬಕಿಂಗ್‌ಹ್ಯಾಂ ಅರಮನೆಗೆ ಆಮಂತ್ರಿಸಿದರು. ಅವನಿಗೆ ಬಹು ಕುಳ್ಳ ಹೆಂಡತಿಯಿದ್ದಳು.

ಅತ್ಯಂತ ಕುಳ್ಳ ಹೆಂಗಸೆಂದು ದಾಖಲೆಯಲ್ಲಿರುವವಳು ಪ್ಯಾಲಿನ್ ಮಸ್ಟರ್ಸ್ ಎಂಬುವವಳು. ಅವಳು 19ನೇ ವರ್ಷ ವಯಸ್ಸಿನಲ್ಲಿ ಸತ್ತಾಗ ಅವಳ ಎತ್ತರ $1\frac{3}{4}$ ಅಡಿ ಇತ್ತು. ಅತ್ಯಂತ ಕುಳ್ಳ ಮನುಷ್ಯನೆಂದರೆ ಕೆಲಿನ್ ಫಿಲಿಪ್ಸ್. 1791ರಲ್ಲಿ ಹುಟ್ಟಿದ ಅವನು 19ನೇ ವರ್ಷ ವಯಸ್ಸಿನಲ್ಲಿ ಅವನ ಎತ್ತರ $20\frac{1}{2}$ ಅಂಗುಲ, ತೂಕ 12 ಪೌಂಡು. ಅಂಡಮಾನಿನ ನಿಗ್ರಿಟೋ ಬ್ಯೂಜ್ ಬುಡಕಟ್ಟಿನವರು ಅತ್ಯಂತ ಕುಳ್ಳ ಜನಾಂಗ. $4\frac{1}{2}$ ಅಡಿ ಎತ್ತರದವರು ಅವರಲ್ಲಿ ಅಪೂರ್ವ.

ದೈತ್ಯಾಕಾರದ ಮನುಷ್ಯರು ದೀರ್ಘ ವಯಸ್ಸಿನವರೆಗೆ ಬದುಕುವುದಿಲ್ಲವೆಂದೂ, ಕುಬ್ಜರು ಸಾಧಾರಣವಾಗಿ ದೀರ್ಘಕಾಲ ಜೀವಿಸುವರೆಂದೂ ದಾಖಲೆಗಳು ಸೂಚಿಸುತ್ತವೆ.





ಕಾವ್ಯವಾಹಿನಿ

# ಸಂಕ್ರಾಂತಿ

—ಎನ್. ಎಸ್. ಅಶ್ವತ್ಥಲಕ್ಷ್ಮಮ್ಮ

ಇಂದು ಸಂಕ್ರಾತಿ
ಜನಮನದ ವಿಪ್ಲವದ ಕ್ರಾಂತಿ
ಬರಿ ಶಾಂತಿಯ ಭ್ರಾಂತಿ !
ಆಗಸದ ಮಾರ್ಗದಲಿ
ನವಕ್ರಾಂತಿ ಹೆಜ್ಜೆಯಿಡೆ
ಇಲ್ಲಿ ಅದಕಿಂತ ಚುರುಕಾಗಿದೆ
ಕ್ರಾಂತಿ ಭ್ರಾಂತಿ ಸಂಕ್ರಾಂತಿ.

ಜನಮನದ ಅಶಾಂತಿ ಕ್ಷೋಭೆಯು
ಎದ್ದಿದ್ದು, ಜೀವನದ ಜಂಜಡದ
ಸಂದಿಗ್ಧ ಸಮರ ನಡೆದಿದೆ
ಅಂತರಂಗೆಯ ತೆರದಿ,
ಮನದ ತುಮುಲದ ಸಂಕ್ರಾಂತಿ !
ಸುಖಶಾಂತಿಯನರಸರಸಿ ಕಂಗೆಡಿಸುತಿದೆ
ಆಗಸದ ವಿಪ್ಲವಕೆ
ಬೇಗೆಯ ಪ್ರಖರತೆಗೆ
ನಾಂದಿ ಹಾಡಲು ತಾನು
ಉತ್ತರಾಯನ ಪುಣ್ಯಕಾಲ ಹೆಜ್ಜೆಯಿಟ್ಟಂತೆ
ಇಂದು ಬಾಳನುತ್ತರಿಸುವ
ಪುಣ್ಯಕಾಲವು ಬದುಕಿನಲಿ ಬರುವುದೆ ?

ಮಕರ ಸುತ್ತಂದದಲಿ
ಮಕರ ಸಂಕ್ರಾಂತಿಯ
ಉದಯವಾಗೆ
ನಭೋಮಂಡಲಕೆ
ವಸ್ತುಗಳ ಬೆಲೆ ಪೈಪೋಟಿಯಲಿ
ಮುಗಿಲ ಮುಟ್ಟಲು ಏರೇರಿ
ಕೈಚಾಚಿ ತಲೆಯೆತ್ತಿ ನಿಲೆ
ಈ ಬೆಲೆಯ ಬೇಗೆಯ
ಬೇಗುದಿಗೆ ಸಿಕ್ಕ ಜನಮನವೆ ಬೆಯುತಿದ್ಯೆ
ಆಶ್ರಯ ದೊರಕುವುದೇ ?
ಮನದ ಮಿಡುಕದು ಸರಿದು
ಬುದುಕು ಬಂಗಾರವಾಗುವುದೇ ?
ಆಗುವುದಾದರೆ ಎಂದು ? ಯಾವಾಗ ?

# ಜಗತ್ತಿನಲ್ಲೇ ಕಡಿಮೆ ತೆರಿಗೆ

ಮಾಸ್ಕೋ–ನವಂಬರ್ 28, 1981 (ತಾಸ್) :

ಸೋವಿಯತ್ ಜನತೆ ಸರಕಾರಕ್ಕೆ ಸಲ್ಲಿಸುವ ತೆರಿಗೆಗಳು ಬದಲಾಗದೇ ಹಾಗೇ ಉಳಿದಿದ್ದು ಜಗತ್ತಿನಲ್ಲೇ ಅತ್ಯಂತ ಕಡಿಮೆ ಪ್ರಮಾಣದ್ದಾಗಿವೆ. ಸೋವಿಯೆತ್ ಒಕ್ಕೂಟದ ಸರ್ವೋಚ್ಚ ಸೋವಿಯೆತ್ ಈಚೆಗೆ ಅಂಗೀಕಾರ ನೀಡಿದ 1982 ರ ಮುಂಗಡ ಪತ್ರ ಇದನ್ನು ಸ್ಪಷ್ಟಪದಿಸಿದೆ. ಮುಂಗಡ ಪತ್ರದ ಪ್ರಕಾರ ಮುಂದಣ ವರ್ಷದ ತೆರಿಗೆ ಮೂಲಕ ಬಜೆಟ್ ವರಮಾನ 28,200 ಮಿಲಿಯ ರೂಬಲ್‌ಗಳು ಅಥವಾ ಒಟ್ಟು ಬಜೆಟ್ ವರಮಾನದ ಒಂಭತ್ತು ಶೇಕಡಾಕ್ಕಿಂತಲೂ ಕಡಿಮೆಯ ಧಾಗಿದೆ. ಉಳಿದ ಶೇಕಡಾ 91ಕ್ಕಿಂತ ಹೆಚ್ಚಿನ ವರಮಾನವು ಸರಕಾರಿ ಉದ್ದಿಮೆಗಳ ವಿವಿಧ ಪಾವತಿಗಳು ಮತ್ತು ಕೊಡುಗೆಗಳು ಹಾಗೂ ಮಾರಾಟ ತೆರಿಗೆಯಿಂದ ಬರುವುದು.

ಸೋವಿಯತ್ ಶ್ರಮಜೀವಿಯ ಕುಟುಂಬ ಸರಾಸರಿ ತನ್ನ ವರಮಾನದಲ್ಲಿ ಕೇವಲ 8 ರಿಂದ 9 ಶೇಕಡಾ ಭಾಗವನ್ನಷ್ಟೆ ತೆರಿಗೆಯ ರೂಪದಲ್ಲಿ ಸರಕಾರಕ್ಕೆ ಸಲ್ಲಿಸುತ್ತದೆಯೆಂದು ಅಂಕಿ-ಅಂಶಗಳು ತೋರಿಸುತ್ತವೆ. ಅದರ ಬದಲು ಸೋವಿಯತ್ ಪ್ರಜೆ ನೇರ ಪಾವತಿ, ಉಚಿತ ಸೇವೆಗಳು ಮತ್ತು ಇತರ ಸೌಕರ್ಯಗಳ ರೂಪದಲ್ಲಿ ಸರಾಸರಿ ಐದು ರೂಬಲ್‌ಗಳನ್ನು ಪಡೆಯುತ್ತಾನೆ. ಸೋವಿಯತ್ ಒಕ್ಕೂಟದ ಉತ್ಪಾದನೆಯ ಸಂಪೂರ್ಣ ವರಮಾನ ಸರಕಾರಕ್ಕೆ ಹೋಗುವುದರಿಂದ ಮತ್ತು ಬಂಡವಾಳ ಶಾಹಿ ದೇಶಗಳಲ್ಲಿನಂತೆ ಉದ್ದಿಮೆದಾರರ ಪಾಲಾಗದೆ ಜನರ ಒಳಿತಿಗಾಗಿಯೇ ಅದು ವಿನಿಯೋಗಿಸಲ್ಪಡುವುದರಿಂದ ಇದು ಇಲ್ಲಿ ವಾಸ್ತವಿಕತೆಯಾಗಿದೆ.

ಎಲ್ಲ ದರ್ಜೆಯ ಕಾರ್ಮಿಕರ ಮೇಲೂ ಪುರೋಗಾಮಿ ಪ್ರಮಾಣದಲ್ಲಿ ಸಂಯೋಜಿತ ವರಮಾನ ತೆರಿಗೆಯನ್ನು ಇಲ್ಲಿ ವಿಧಿಸಲಾಗಿದೆ. ವರಮಾನಕ್ಕೆ ಅನುಗುಣವಾಗಿ ಹೆಚ್ಚಿದ್ದರೆ ಹೆಚ್ಚು, ಕಡಿಮೆಯಿದ್ದರೆ ಕಡಿಮೆ. ಪರಮಾವಧಿ ಎಂದರೆ 13 ಶೇಖಡಾ ಸಮುದಾಯ ಕೃಷಿ ಕ್ಷೇತ್ರಗಳು ಮತ್ತು ಸರಕಾರ ವ್ಯವಸಾಯ ಕ್ಷೇತ್ರಗಳ ಕಾರ್ಮಿಕರು ಹೊಸ ತೆರಿಗೆಯನ್ನು ಸಲ್ಲಿಸಬೇಕಾಗಿದೆ. ಇದು ವರಮಾನ ತೆರಿಗೆಗಿಂದ ಎಷ್ಟೋಪಾಲು ಕಡಿಮೆಯಾಗಿದೆ. ಸ್ವತಂತ್ರ ವರಮಾನ ಹೊಂದಿಪ ಹಾಗೂ ಮಕ್ಕಳಿಲ್ಲದ ಎಲ್ಲ ಪ್ರಜೆಗಳು ಮಕ್ಕಳಿಲ್ಲದುದಕ್ಕಾಗಿ ವಿಶೇಷ ತೆರಿಗೆಯನ್ನು ಸಂದಾಯ ಮಾಡಬೇಕಾಗಿದೆ. ಇದರ ಪ್ರಮಾಣ ಸ್ವಲ್ಪ ಹೆಚ್ಚಿನದಾಗಿದೆ. ವರಮಾನದ ಆರು ಶೇಕಡಾದಷ್ಟು ಈ ತೆರಿಗೆಯ ಒಂದು ಭಾಗವನ್ನು ಸರಕಾರ ಮಕ್ಕಳನ್ನು ಹೊಂದಿರುವ ಕುಟುಂಬಗಳಿಗೆ ಮರುವಿತರಣೆಗೆ ಬಳಸುತ್ತದೆ.

ದ್ವಿತೀಯ ಯುದ್ಧದ ಸಂತ್ರಸ್ತರು, ನಿವೃತ್ತಿ ವೇತನದಾರರು ತೆರಿಗೆ ಸಲ್ಲಿಸಬೇಕಾಗಿಲ್ಲ. ಕನಿಷ್ಠ ವೇತನ ಹೊಂದಿದವರನ್ನು ತೆರಿಗೆಯಿಂದ ಹೊರತುಪಡಿಸಲಾಗಿದೆ. ಸೈನಿಕರು, ವಿದ್ಯಾರ್ಥಿಗಳು, ತರುಣ ದಂಪದಿಗಳಿಗೆ ಅನೇಕ ವಿನಾಯತಿ ನೀಡಲಾಗಿದೆ ●



## ತುಮಕೂರು ಟೌನ್ ವೀರಶೈವ ಕೋ-ಆಪರೇಟೀವ್ ಬ್ಯಾಂಕ್ ಲಿ.,
ತುಮಕೂರು.

ನಿಮ್ಮ ಸುಭದ್ರ ಭವಿಷ್ಯತೆಗಾಗಿ !

ನಮ್ಮ ಈ ಕೆಳಕಂಡ ಉಳಿತಾಯ ಯೋಜನೆಗಳಲ್ಲಿ ಭಾಗವಹಿಸಿರಿ !!

* ನಿಶ್ಚಿತ ಠೇವಣಿ
* ವರಲಕ್ಷ್ಮೀ ಸರ್ಟಿಫಿಕೇಟ್
* ಚಾಲ್ತಿ ಖಾತೆ
* ಕ್ಯುಮುಲೇಟಿವ್ ಡಿಪಾಜಿಟ್
* ಮಹೇಶ್ವರ ನಿತ್ಯನಿಧಿ ಯೋಜನೆ

| ತಿಂಗಳ ಅವಧಿ | ನೀವು ತುಂಬುವ ಠೇವಣಿಯ ಮೊಬಲಗು | ವಾಯಿದೆ ನಂತರ ಸಿಗುವ ಮೌಲ್ಯ |
|---|---|---|
| 12 | 120 00 | 124 70 |
| 24 | 2[illegible] 00 | 258 00 |
| 37 | 370 00 | 425 00 |
| 48 | 480 00 | 572 70 |
| 60 | 600 00 | 748 60 |
| 63 | 610 00 | 806 10 |
| 72 | 720 00 | 955 10 |
| 84 | 840 00 | 1170 00 |
| 96 | 960 00 | 1404 90 |
| 108 | 1080 00 | 1661 60 |
| 120 | 1200 00 | 1942 30 |

## ವರಲಕ್ಷ್ಮಿ ಕ್ಯಾಶ್ ಸರ್ಟಿಫಿಕೇಟ್

| ತಿಂಗಳು | ರೂ. 100—00 | ರೂ. 1000—00 | ರೂ. 5000—00 | ರೂ. 10000—00 |
|---|---|---|---|---|
| 12 | 108 20 | 1082 00 | 5410 00 | 10820 00 |
| 24 | 117 20 | 1172 00 | 5860 00 | 11720 00 |
| 36 | 126 85 | 1268 50 | 6340 00 | 12680 00 |
| 39 | 135 70 | 1357 00 | 6785 00 | 13570 00 |
| 48 | 145 60 | 1456 00 | 7280 00 | 14560 00 |
| 60 | 159 90 | 1599 00 | 7995 00 | 15990 00 |
| 63 | 176 80 | 1768 00 | 8740 00 | 17860 00 |
| 72 | 191 80 | 1918 00 | 9590 00 | 19180 00 |
| 84 | 213 75 | 2137 50 | 10687 50 | 21375 00 |
| 96 | 238 25 | 2382 50 | 11912 50 | 23825 00 |
| 108 | 265 60 | 2656 00 | 13280 00 | 26560 00 |
| 120 | 296 00 | 2960 00 | 14800 00 | 29600 00 |

LICENCED TO POST WITHOUT PRE PAYMENT LICENCE NO. 3
SIDDAGANGA Monthly Reg No. KRN Q-9



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.